ಕರ್ನಾಟಕ ಸರ್ಕಾರ

# ತೋರಣ

## ಅರೆಭಾಷೆ ಕವನ ಸಂಕಲನ



ಬಾರಿಯಂಡ ಆರ್. ಜೋಯಪ್ಪ

ಕರ್ನಾಟಕ ಅರೆಬಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡಮಿ

# ಕೋೞಣಿ

## ಅರೆಭಾಷೆ ಕವನ ಸಂಕಲನ

ಬಾರಿಯಂಡ ಆರ್. ಜೋಯಪ್ಪ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.
ಮಡಿಕೇರಿ, ಕೊಡಗು ಜಿಲ್ಲೆ – 571 201

**'THORANA'** a collection of Poems in Arebhase language written by Bariyanda R. Joyappa, Made Village, Madikeri Taluk, Kodagu. Published by 'Karnataka Arebhase Samskrithi Mathu Sahitya Academy.

ಪ್ರಕಟಣೆ : **2016**

ಪ್ರತಿಗಳು : **500**

ಬೆಲೆ : ರೂ. 70/- Price : Rs. 70/-

**ಪುಟಗಳು : 12+88**



ಸಲಹ ಸಮಿತಿ :

ಶ್ರೀ ಕೊಲ್ಯದ ಗಿರೀಶ್
ಡಾ. ಪೂವಪ್ಪ ಕಣಿಯೂರು
ಡಾ. ಕೋರನ ಸರಸ್ವತಿ ಪ್ರಕಾಶ್
ಶ್ರೀ ಮೋಹನ ಸೋನ
ಶ್ರೀಮತಿ ಸಂಗೀತ ರವಿರಾಜ್

ಪ್ರಕಾಶಕರು : ರಿಜಿಸ್ಟ್ರಾರ್
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.

**ಪುಸ್ತಕ ದೊರೆಯುವ ಸ್ಥಳ :**

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,
ಕಾಫಿ ಕೃಪ ಬಿಲ್ಡಿಂಗ್, ಮಹಾತ್ಮ ಗಾಂಧಿ ರಸ್ತೆ, ಮಡಿಕೇರಿ.
ದೂ. : 08272-223055

ಮುಖಪುಟ ವಿನ್ಯಾಸ : ಡಾ| ಚರಿತ
ಮನೆ ಸಂ. 1255, ಪಡುವಣ 4ನೇ ಅಡ್ಡ ರಸ್ತೆ,
ಕುವೆಂಪುನಗರ, ಮೈಸೂರು.

ಮುದ್ರಣ :
ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,
ಮಡಿಕೇರಿ, ಕೊಡಗು
Ph : 08272-224919, 9448135592

# ಅಧ್ಯಕ್ಷರ ಮಾತ್

ಅರೆಬಾಸೆಲಿ ಬರೆಯವು ಒಳೊಂತೇಳ್ವ ವಿಚಾರ ಕೇಳ್ರೆ ಖುಷಿ ಆದೆ. ಸರಕಾರ ರಚನೆ ಮಾಡ್ದ ಅರೆಭಾಷೆ ಅಕಾಡೆಮಿಗೆ ಕೂಡ ಸಾರ್ಥಕತೆ ಇದ್ದದೆ. ಶುರುಗೆ 4 ಪುಸ್ತಕನ ಪ್ರಕಟನೆ ಮಾಡ್ದ ಗೌರವ ಅಕಾಡೆಮಿಗೆ ಸಲ್ಲಿದೆ, ಮತ್ತೆ 6 ಪುಸ್ತಕನ ಪ್ರಕಟಣೆ ಮಾಡ್ತಾವೊಳೊ.

ಪುಸ್ತಕ ಬರ್ದ ಎಲ್ಲಾ ಲೇಖಕರಿಗೂ ನನ್ನ ಹೃತ್ಪೂರ್ವಕ ಅಭಿನಂದನೆನ ತಿಳಿಸ್ತಾವೊಳೆ. ಬರ್ದ ಎಲ್ಲಾ ಪುಸ್ತಕ ಶ್ರೇಷ್ಠ ಅಂತ ನಾನ್ ಹೇಳ್ದುಲೆ. ಲೇಖಕರ್ ಅವರ ಸೃಜನ ಶೀಲತೆನ ಈ ಲೇಖನಲಿ ತೋರ್ರೊಳೊ. ಹಂಗೆ ಎಲ್ಲಾ ಪ್ರಕಾರಗಳ್ಲಿ ಅವರ ಸಾಮರ್ಥ್ಯನ ಒರೆಗೆ ಹಚ್ಚಿಯೊಳೊ.

ಬಾರಿಯಂಡ ಜೋಯಪ್ಪನವು ವೃತ್ತಿಲಿ ಶಿಕ್ಷಕರ್, ಪ್ರವೃತ್ತಿಲಿ ಸಾಹಿತಿ, ಕವಿ, ಚಿಂತಕ, ಅನುವಾದಕ. ರಾಜ್ಯಮಟ್ಟದ ಉತ್ತಮ ಶಿಕ್ಷಕ ಪ್ರಶಸ್ತಿ ಪಡ್ದವು ನನ್ನ ಊರ್ನವೆ ಆದ ಅವ್ರ ಬಗ್ಗೆ ಅಪಾರ ಗೌರವ, ಸಾಕಷ್ಟ್ ಊರು ಮಕ್ಕಳಿಗೆ ಬದ್ಕ್ ಕಟ್ಟಿಕೆ ದಾರಿ ತೋರ್ಸಿದವು. ಶಿಕ್ಷಕ ವೃತ್ತಿಯ ಒಟ್ಟಿಗೆ ಸಾಹಿತ್ಯ ಕೃಷಿ ಮಾಡಿಕಂಡಿರ್‌ವ ಅವ್ರ ಶುರೂನ ಕೃತಿ 'ಚಾಂಪ' ಅಪಾರ ಜನ ಮನ್ನಣೆ ಸಿಕ್ಕುಟು, ಅಕಾಡೆಮಿಂದ ಪ್ರಕಟ ಆಗ್ತ ಉಳೊ "ತೋರಣ" ಅರೆಭಾಷೆ ಕವನ ಸಂಕನಲಿ ಪರಿಸರದ ಬಗ್ಗೆ ಸಾಕಷ್ಟ್ ವಿಚಾರನ ತಿಳ್ಸೊಳೊ, "ಅದ್ಭುತ ಎಲ್ಲ ಹಿಂಗೆ" ತೇಳ್ವ ಕವನಲಿ ಯಾರ್ ಗೋಷ್ಠಿಮಾಡದ ಪರಿಸರದ ಸದ್ದ್ ರಹಿತ ಬದಲಾವಣೆ ಬಗ್ಗೆ ಅದ್ಭತವಾಗಿ ಮೂಡ್ಸಿಯೊಳೊ ಹಂಗೆ ಅರೆಬಾಸೆಲಿ ಅವರ ತ್ರಿಪದಿ ಒದಿಕೆ ಜೇನ್ ತಿಂದಷ್ಟ್ ಸಿಹಿ. ನಮ್ಮ ಜೀವನ ಮತ್ತೆ ಸುತ್ತ-ಮುತ್ತ ಪರಿಸರನ ಕವನ ರೂಪಲಿ ಬರ್ದ ಶ್ರೀಯುತ ಜೋಯಪ್ಪನವ್ಕು ಪುಸ್ತಕ ಸಮಿತಿಯವ್ಕು ಅಕಾಡೆಮಿ ಸದಸ್ಯರಿಗೂ ನನ್ನ ಪ್ರೀತಿಯ ಕೃತಜ್ಞತೆನ ಸಲ್ಲಿಸ್ತಾವೊಳೆ.

**ಕೊಲ್ಯದ ಗಿರೀಶ್**
ಅಧ್ಯಕ್ಷರ್

# ತೋರಣಕ್ಕೊಂದು ರಂಗೋಲಿ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಆದ ಈ ಹೊತ್ತ್‌ಲಿ ನಾವು ಅರೆಭಾಷೆಲಿ ಏನ್ ಸಾಹಿತ್ಯಿಕ ಕೆಲ್ಸ ನಡ್ದೊಳೊಂತ ತಿರ್ಗಿ ನೋಡೊಕಾದೆ. ೧೯೭೦ರ ಸುಮಾರಿಗೆ ನಮ್ಮ ಹಿರಿಯರಾದ ಪ್ರೊ| ಕೋಡಿ ಕುಶಾಲಪ್ಪ ಗೌಡ ಇವು ಇಂಗ್ಲಿಷ್‌ಲಿ "ಗೌಡಕನ್ನಡ"ಂತ ಈ ಅರೆಭಾಷೆನ ಬಗ್ಗೆ ಸಂಶೋಧನಾತ್ಮಕ ಲೇಖನಗಳ ಬರ್ದಿದ್ದೊ. ಅದಲ್ಲದೆ ಗೌಡ ಕನ್ನಡಲಿ ಸಾವಿಸ್ತಾರಾಗಿ ಲೇಖನ ಬರ್ದಿದ್ದೊ. ಅಂದರೆ ಸುಮಾರ್ ನಲ್ವತ್ತೈದ್ವರ್ಸಗಳ ಹಿಂದೆನೇ ಅರೆಭಾಷೆ ಬಗ್ಗೆ ಆಳವಾದ ಅಧ್ಯಯನ ನಡ್ದುಟುಂತಂದರೆ ನಾವದಕ್ಕೆ ಹೆಮ್ಮೆ ಪಡೊಕಾದೆ. ಹಿಂಗೆ ಅವು ಈ ಭಾಷೆಗೆ ಸಾಹಿತ್ಯಕ ಅಡಿಗಲ್ಲು ಹಾಕಿ ಕೊಟ್ಟೊಳೊ.

೧೯೮೬ರ್ಲಿ ಶ್ರೀ ಸೂದನ ಈರಪ್ಪನವು 'ಗೌಡದೊನಿ'ಂತ ಪುಸ್ತಕ ಸಂಪಾದಿಸಿದೊ. ಹತ್ತಿಪ್ಪತ್ತ್ ಲೇಖನಗ, ಹಾಡ್‌ಗ ಅರೆಭಾಷೆಲೇ ದಾಖಲಾದ್ದ್ ಈ ಭಾಷೆನ ಬೆಳವಣಿಗೆನ ಇನ್ನೊಂದು ಹಂತ. ದಿ| ಕೊಳಂಬೆ ಪುಟ್ಟಣ್ಣ ಗೌಡ ಇವು ಅವರ 'ತಾಳಿ'ನಾಟಕಲಿ ಅರೆಭಾಷೆನ ಸೇರ್ಸಿಕಂಡಿದ್ದೊ.

೨೦೦೩ನೇ ಇಸ್ವಿಲಿ ಶ್ರೀ ಬಾರಿಯಂಡ ಆರ್. ಜೋಯಪ್ಪನವು 'ಚಾಂಪಾ' ಹೆಸರ್ಲಿ ಅರೆಭಾಷೆದ್ದೇ ಕತೆಗಳ ಜೊಂಪೆನ ಪ್ರಕಟಿಸಿದೊ. ಅರೆಭಾಷೆಗೆ ಶ್ರೀ ವಿದ್ಯಾಧರ ಬಡ್ಡಡ್ಕ, ಶ್ರೀ ಹೊದ್ದೆಟ್ಟಿ ಭವಾನಿ ಶಂಕರ ಇವುಕೊಟ್ಟ ಕೊಡುಗೆಗಳ ಮರೆವ ಹಂಗಿಲ್ಲೆ. ಪುಸ್ತಕ ರೂಪಲಿ ಅಲ್ಲದೆ ಬಿಡಿ ಲೇಖನ\ಕವನಗಳ ಬರ್ದವು ತುಂಬಾ ಜನ ಒಳೊ.

ಅರೆಭಾಷೆ ಅಕಾಡೆಮಿ ಆಕೆ ಹಿಂದೆ, ಸುಮಾರು ಐವತ್ತು ವರ್ಸಲಿ ಇಷ್ಟ್ ಸಾಹಿತ್ಯಕ ಕೆಲ್ಸ ಆಗಿತ್ತ್. ಆ ಮೇಲೆ ಸೊಲ್ಪ ವೇಗಂದ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳ ಬರೆಹಗ ಪತ್ರಿಕೆಗಳಲ್ಲಿ ಪುಸ್ತಕ ರೂಪಲಿ ಬಾಕೆ ಸುರು ಆದೊ.
ಸುಳ್ಯದ 'ಸುದ್ದಿ ಬಿಡುಗಡೆ' ವಾರ ಪತ್ರಿಕೆ ಇದಕ್ಕೆ ಮುಕ್ತ ಅವಕಾಶ ಕೊಟ್ಟಿತ್.
ಶ್ರೀ ಯಶವಂತ ಕುಡೆಕಲ್ಲು, ಶ್ರೀಮತಿ ಎಂ.ಜಿ. ಕಾವೇರಮ್ಮ ಹಿಂಗೆ ಹಲವರ್ ಅರೆಭಾಷೆಲಿ ಬರೆಯತಾ ಒಳೊ.

೨೦೦೪ರ್ಲಿ ಡಾ|| ನಿಡಿಂಜಿ ಕರುಣಾಕರರ 'ನೀಲಿದಾರಿ' ಅರೆಭಾಷೆ ಕವನ ಸಂಕಲನ ಪ್ರಕಟ ಆತ್. ಇದೇ ಸಮಯಲಿ ಪ್ರೊ| ಕೋಡಿಯವು 'ಮಾನಸ ಮಹಾಭಾರತ'ಂತ ಹೆಬ್ಬೊತ್ತಗೆನ ಹೊರತಂದೊ. ಅರೆಭಾಷೆಲಿ ೨೪೦ ಪುಟದ ಪುಸ್ತಕ ಬಂದದ್ ಇದೇ ಸುರು.

'ಚಾಂಪಾ' ಕಥಾ ಸಂಕಲನ ಅರೆಭಾಷೆಗೇ ಸುರೂನ ಕಥಾ ಸಂಕಲನ. ಆ ಪುಸ್ತಕನ ತಂದ ಶ್ರೀ ಜೋಯಪ್ಪನವು ಇದೀಗ 'ತೋರಣ' ಹೆಸರ್ಲಿ ಅರೆಭಾಷೆ ಕವನ

ಸಂಕಲನ ತಾವ ತಯಾರಿಲಿ ಒಳೊ. ಅದರ ಬಗ್ಗೆ ಎರಡ್‌ಮಾತ್ ಬರ್ಯಕೆ ನನ್ನ ಹಕ್ಕಲೆ ಹೇಳ್ದೊ. ಇಂಥದ್ದಕ್ಕೆ ನಾ ಹಿಂದೆನೇ. ಆದರೂ ಅವರ ಮೇಲಣ ಅಭಿಮಾನಕ್ಕೆ ಒಪ್ಪಿ ನಾಲ್ಕ್ ಮಾತ್ ಬರ್ದ್ದೊಳೆ.

'ತೋರಣ'ದ ಹೂರಣ ಪ್ರಕೃತಿ, ಅದರ ಸ್ಥಿತ್ಯಂತರ, ಕಾಲ, ಮುರ್ಗ, ಪಕ್ಷಿ, ಮೊನ್ಸ ಸಮ್ಮಂದಗ, ಸಮಾಜಲಿ ನಡೆವ ದುರಾಚಾರಗ, ಬದ್ಕ್ ಹಿಂಗೆ ಹತ್ತ್ ಹಲವು ವಸ್ತುಗ ಒಳೊ. ಅವುಗಳೆಲ್ಲದರ ಸೂಕ್ಷ್ಮಲಿ ಕವಿ ಕಣ್ಣ್‌ಂದ ನೋಡಿ ಕಾವ್ಯಮಯ ಸ್ಪರ್ಶ ನೀಡಿಕೆ ಜೋಯಪ್ಪನವು ಪ್ರಯತ್ನಿಸ್ಯೊಳೊ. ಇದ್ರೊಟ್ಟಿಗೆ ಸಣ್ಣ ಮಕ್ಕಳಿಗೆ ಹೇಳ್ವಂಗೆ "ಕಂದ"ಂತ ಕರ್ದ್, ಬೇರೆ ಬೇರೆ ವಿಷಯಕ್ಕೆ ಸಮ್ಮಂದಪಟ್ಟ ಹಂಗೆ ಇನ್ನೂರ ನಲವತ್ತೊಂದು ತ್ರಿಪದಿ (ಮುಕ್ತಕಗಳ) ಬರ್ದ್ದೊಳೊ.

ಇವರ ಭಾಷೆ ಸರಳ, ಸಹಜ, ಸುಭಗ, ನೇರ. ಸ್ವಭಾವೋಕ್ತಿಗ ಅಲ್ಲಲ್ಲಿ ಮಿಂಚ್‌ವೆ. ಪ್ರತಿಮೆ, ಉಪಮೆಗ ಕಮ್ಮಿ. ಯಾರ್ ಸಾನ ಅರ್ತ ಮಾಡಿಕಂಬ ಹಂಗಿರುವ ಆಡ್ ಮಾತ್‌ನ ಜಾನಪದ ಶೈಲಿ. ಉತ್ತರ ಕರ್ನಾಟಕದ ಭಾಷೆ ಗಂಡ್ ಭಾಷೆಂತ ಹೇಳ್ವೆ. ನಮ್ಮದ್ ಹೆಣ್ಣ್ ಭಾಷೆ. ಮಹಾಪ್ರಾಣಾಕ್ಷರಗ ಕಮ್ಮಿ ಇರ್ವ ಮೆತ್ತಂಗಿನ ಎರ್ಡ್ ಮೂರಕ್ಷರದ ಶಬ್ದಗಳೇ ಹೆಚ್ಚ್. ಅದ್ರಂದಾಗಿ ಈ ಭಾಷೆಗೊಂದು ಲಾಲಿತ್ಯ ಉಟ್ಟು. ಜೋಯಪ್ಪನವರ ಹಾಡ್‌ಗಳಲ್ಲಿ ಆ ಲಾಲಿತ್ಯ ಕಂಡದೆ.

'ತೋರಣ'ದ ಸುರುನ ಹಾಡ್ 'ಉದಯರಾಗಕ್ಕಾಗಿ'. ಒಂದು ಬೊಳ್ಪುಂದ ಇನ್ನೊಂದು ಬೊಳ್ಪು ಮುಟ್ಟ ಹಕ್ಕಿಗಳ ದಿನಚರಿ ಇಲ್ಲಿ ಹಾಡಾಗುಟು.
"ಬೊಳಿ ಬುಡಕನ ಎದ್ದ್ ........ ಉದಯರಾಗಕ್ಕಾಗಿ ಕಾದ್ ಕುದ್ದೊ" ಹಕ್ಕಿಗ ಬೊಳ್ಪುಗೆ ಗದ್ದೆ, ಬಯ್ಲ್, ಗುಡ್ಡ, ಬೆಟ್ಟ, ಹಳ್ಳ ತೋಡುಗಳ ಮೇಲೆಂದ ತೇಲಿಕಂಡ್ ಹೋದ ಹಂಗೆ ಹಾರ್‌ವ, ಹಿಂಬೊತ್ತ್ ಹಂಗೇ ದಾರಿ ತಪ್ಪದೆ ಬಾವ, ಕತ್ತಲಾಕನ ಮರಗಳ ಗೆಲ್ಲ್‌ಲಿ ಮೈಗೆ ಮೈ ತಾಂಗಿಸಿಕಂಡ್ ಕೂರುವ ಚಿತ್ರಂಗ ನಮ್ಮ ಕಣ್ಣೆದ್ರ್ ಕಟ್ಟಿದೆ. ಅವುಗಳ ಕಲರವ ಕೆಬಿಗೆ ಕೇಳ್ದೆ. ಈ ಪೂರ್ಲುನ ಹಾಡ್ ಓದಿಕನ ನಾವೂ ತೇಲಿ ಹೋದಂಗೆ ಆದೆ. ಈ ಸಂಕಲನದ ಒಳ್ಳೆ ಕವನಗಳ್‌ಲಿ ಇದೊಂದ್.

ಎಪ್ಪತ್ತ್ ಎಂಬತ್ತ್ ವರ್ಷದ ಮುಪ್ಪುಲಿ ಹೊಸ ಮದುಮಕ್ಕಳ ಹಂಗೆ 'ಜೋಡಿ ಹಕ್ಕಿ' ಗ ಆಗಿ, ಒಬ್ಬನ ಒಬ್ಬ ಬುಟ್ಟಿರದೆ ಅನ್ಯೋನ್ಯಲಿ, ಕುಸಿಲಿ ಬದ್ಕ್‌ವ ಸಾರ್ಥಕ ದಾಂಪತ್ಯ ಜೀವನದ ಗಂಡ ಹೆಣ್ಣ್‌ನ ನೆನ್ಸಿಕನ ಅವೆಷ್ಟ್ ಪುಣ್ಯವಂತರ್‌ಂತ ನಮ್ಮ ಎದೆ ತುಂಬಿ ಬಂದದೆ. ಆ ಹಾಡ್ ಓದಕನ ಕವಿ ಕೆ. ಎಸ್. ನರಸಿಂಹಸ್ವಾಮಿ ಅವರ ನೆಂಪಾದೆ.

ಮೊನ್ಸ ಮಾಡ್ದ 'ಪಂಜರಲಿ' ಪ್ರಾಣಿ ಪಕ್ಷಿಗ ತಮ್ಮ ಜನ್ಮ ಸ್ವಭಾವಗಳ ಮರ್ತರೆ, ಮೊನ್ಸ ತನ್ನ ಸ್ವಾರ್ಥದ ಪಂಜರಲಿ ತಾನೇ ಬಂಧಿಯಾಗಿ, ಪ್ರಾಣಿ ಸ್ವಭಾವಗಳ

ಬೆಳ್ಳಿಕಂಡದೆಂತೇಳ್ವ ವ್ಯಂಗ್ಯ 'ಪಂಜರ' ಕವನಲಿ ಉಟ್ಟು.

ಚರಾಚರಗಳಲ್ಲಿ ಚೈತನ್ಯ ತುಂಬುವ 'ವಂಸತ ಕಾಲ' 'ವಜ್ರ ಹುಳಗಳ ಜಾತ್ರೆ' ನಂತ ಚಂದದ ಕಲ್ಪನೆಗಳ ವರ್ಣನೆಂದ ಕೂಡ್ದ ಕುಸಿ ಕೊಡುವ ಪದ್ಯ.

'ಅದ್ಭುತ ಎಲ್ಲ ಹಿಂಗೆ' ಇದರ್ಲಿ ವೈಚಾರಿಕತೆ ಇದ್ದರೆ, "ಅವ್ವ, ನಿ ಎಲ್ಯೊಳ" ಕವನಲಿ ಭಾವುಕತೆ ಉಟ್ಟು. ಕೂಸು ಸುರುಗೆ ಬರ್ದ 'ಸೊನ್ನೆ' 'ಶೂನ್ಯವೇ ಬದುಕಿನ ಗುಟ್ಟು' ಎಂಬುದರ ಸಂಕೇತಿಸಿದೆ.

ವಿದ್ಯಾವಂತ, ಬುದ್ಧಿವಂತ, ವಿಜ್ಞಾನಿ ಮೊನ್ಸನ ತಿಳಿವಳಿಕೆನ, ಸಣ್ಣ ಮೆದುಳಿನ 'ಕಾಲಜ್ಞಾನಿ' ಹಕ್ಕಿ ಕವಿತೆ ಲೇವಡಿ ಮಾಡ್ದೆ. ಮೈಸೂರು ದಸರಾದ ಹಂಗೆ ಮಡಿಕೇರಿ ದಸರಾನೂ ಪ್ರಸಿದ್ಧನೇ. ಆ ಎರ್ಡ್ ದಸರಾಗಳ ನೋಡದವ್ಕೆ ದಸರಾದ ಚಿತ್ರ ಕಣ್ಣಿಗೆ ಕಟ್ಟುವ ಹಂಗೆ ಲಯಬದ್ಧವಾದ ಹಾಡಾಗಿ ಬಂದುಟು 'ಮಡಿಕೇರಿ ದಸರಾ'.

'ಸುಡುಕುಣಿ ಮತ್ತೆ ಮರ' ಮುಕ್ತ ಛಂದಸ್ಸಿನ ಈ ಕವನ, ಸಂಕಲನದ ಒಳ್ಳ ಪದ್ಯಗಳ್‌ಲಿ ಒಂದ್. ಸುಡುಕುಣಿಲಿ ಅದರಷ್ಟಕ್ಕೆ ಬೆಳ್ದ ಒಂದ್ ಮಾವಿನ ಮರ. ತಾನ್ ಸತ್ತನೆ, ನಂಗೂ ಒಂದ್ ಸಾವುಟ್ಟುಂತ ಹೇಳುದರ ಮರ್ಸ್ತ್, ಕಡೆಗೆ ಈ ಸುಡುಕುಣಿಲಿ ಸುಟ್ಟೋ, ಹೂಣಿಯೋ ಮಣ್ಣಾದ ಮೊನ್ಸನ ರಸ ಹೀರಿ ಬೆಳ್ದ ಮರ, ಅವರ ಮಾತಾಡ್ಸಿದೆ; ಅವರ ಗತಿಗೆ ನೆಗಾಡ್ದೆ.

"ಕಾಲ ಕಾಲಕೆ ಮರ ಹೂವು ಬುಟ್ಟದೆ, ಹಣ್ಣ್ ಕೊಟ್ಟದೆ.
ಹೂವು ಯಾವ ಜಾತಿದ್? ಹಣ್ಣ್ ಯಾವ ಧರ್ಮದ್?
ಬೇರ್ ಹೀರ್ದ ಸಾರ ಯಾವ ಹೆಣದ್?"

ಸತ್ತಂವ ಎಂಥವ ಆದರೂ ಅದರ ಮರ್ಸ್ತ್, ಅವನ ರಸ ಹೀರಿ ತನ್ನ ಮೂಲಕ ಮರ ಅವಂಗೆ ಜಿಂವ್ವ ಕೊಟ್ಟದೆ. ಈ ಕವನಲಿ ಪಾರಮಾರ್ಥಕ ಕಲ್ಪನೆ ಉಟ್ಟು. "ಬುದ್ಕ್‌ನ ಸಂತೆ" ಕವನ ಲಯಬದ್ಧವಾಗಿ ಗೇಯವಾಗಿ ಸಾ ಉಟ್ಟು. "ಬಾಣೆದ್ ಸಂತೆಗೆ ಬಾಗಿಲೆ ಇಲ್ಲೆ ಸಂತೆಗೆ ದಾರಿ ಹತ್ತಾರ್"

ಬದ್ಕ್‌ಲಿ ಹತ್ತಾರ್ ದಾರಿ ಉಟ್ಟು. ಬುದ್ಧಿವಂತಿಕೆಂದ, ವಿಮರ್ಶೆಂದ ನಡ್ದರೆ ಮಾತ್ರ ಗುರಿ ಮುಟ್ಟಕ್ಕ್. ಸುಮ್ಮನೆ ಸುತ್ತಿ, ಕುದ್ದು ಬದ್ಕ್‌ನ ಹಾಳ್ ಮಾಡಿಕಣ್‌ಬೇಡ ಎಚ್ಚರಲಿ ನಡ್ದರೆ, ಹೊಂದಾಣಿಕೆಂದ ಹೋದರೆ ಬದ್ಕ್ ಸಾರ್ಥಕ ಆದೆಂತೇಳ್ವ ತಾತ್ವಿಕತನನ ಈ ಕವನಲಿ ಸೂಚಿಸ್ಯೊಳೊ.

# ತ್ರಿಪದಿಗ

'ಕಂದ' ನ ಉದ್ದೇಶಿಸಿಕಂಡ್ ಹೇಳ್ವ ಈ ತ್ರಿಪದಿಗ ಕನ್ನಡದ ಜಾನಪದ ತ್ರಿಪದಿಗಳ ಜಾಯಮಾನಕ್ಕೆ ಒಗ್ಗಿಕಂಡವೆ. ಈ ತ್ರಿಪದಿಗಳ ರಚನೆ ಜಾನಪದ ತ್ರಿಪದಿಗಳಿಗಿಂತ ಸೊಲ್ಪ ಬೇರೆ ಆಗಿ ಉಟ್ಟು. ಮೂರು ಪಾದಗ ಆದರೂ ಆ ಪಾದಗಳ ಗಣಲಿ ವೆತ್ಯಾಸ ಉಟ್ಟು. ಆದರೂ ಅದ್ ಕವಿಗೆ ಬುಟ್ಟದ್ದ್. ಮಕ್ಕಳಿಗೆ ಹಿರಿಯರ್ ಹೇಳ್ವ ನೀತಿಗೇ ಇಲ್ಲಿ ಒತ್ತು ಕೊಟ್ಟ ಕಾರಣ ಕಾವ್ಯಾಂಶದ ಕೊರತೆ ಸ್ವಲ್ಪ ಕಂಡದೆ. ಆದರೂ ಎಡೆ ಎಡೆಲಿ ರಸಾತ್ಮಕ ವೈಚಾರಿಕ ತ್ರಿಪದಿಗ ಒಳೊ. ಆಧುನಿಕ ವಿಚಾರಗಳ ಹುಡುಕಾಟ ಇಲ್ಲಿ ಉಟ್ಟು.

ಮಲ್ಲಿಗೆ ಘಮ ಘಮ । ಸಂಪಿಗೆ ಘಮ ಘಮ
ನಮ್ಮನೆಗೆ ನೀನ್ ಸರಿಗಮ ।೨।
ಕಂದ । ಮನೆಯವುಕೆ ಯಾಗೊಳು ಸಂಭ್ರಮ.

ಕಂದ ಇರುವ ಮನೆಲಿ ಸಂತೋಷದ ಪರಿಮಳ, ಕಂದನ ಮಾತ್‌ನ ಸಂಗೀತ ಮತ್ತೆ ಮನೆಯವ್ಕೆ ಕೂಸಿಂದಾಗಿಯೇ ಸಂಭ್ರಮ ಇರುದರ ಲಾಯ್ಕಾಗಿ ಹೇಳ್ಯೊಳೊ ಈ ತ್ರಿಪದಿಲಿ.

ಸುಂಟರಗಾಳಿ । ಸುಳಿಗಾಳಿ ಬೀಸಿದೆ
ಬೀಸಿರೆ ಬೀಸಲಿ ಸುಳಿಗಾಳಿ ।೨।
ಕಂದ । ನಮ್ಮನೆಗೆ ನೀನ್ ಮೆದುಗಾಳಿ

ಇಲ್ಲಿ ಮೆದುಗಾಳೀನ ಬದಲಿಗೆ ತಂಗಾಳಿ ಒಪ್ಪುತಿತ್ತೊ ಏನೋ. ಜಾನಪದ ಹಾಡ್‌ಲಿ

"ಕೂಸು ಇರುವ ಮನೆಗೆ ಬೀಸಣಿಕೆ ಯಾತಕ್ಕೆ
ಕೂಸು ಕಂದಯ್ಯ ಒಳ ಹೊರಗೆ । ಆಡಿದರ
ಬೀಸಣಿಕೆ ಗಾಳಿ ಸುಳಿದಾವು॥ ತೇಳ್ವ ತ್ರಿಪದಿ ನೆಂಪಾದೆ.

ಹಗ್ಲ್‌ಗೆ ಸೂರ್ಯ । ಇರ್ಲ್‌ಗೆ ಚಂದ್ರ
ಹಗ್ಲ್ ಇರ್ಲ್‌ಗೆ ನೀಯೆಲ್ಲ ।೨।
ಕಂದ । ನೀ ಸೂರ್ಯ ಚಂದ್ರನೆ ನಮಿಗೆಲ್ಲ.

ಕೂಸು, ಹಗ್ಲ್ ಇರ್ಲ್ ಬೆಳಕ್ ಕೊಡುವ ಸೂರ್ಯ ಚಂದ್ರನೇಂತ ಹೇಳುವ ಕಲ್ಪನೆ ಪೊರ್ಲ್‌ದ್.

ಹಣನೂ ಬಂದದೆ । ಆಸ್ತಿನೂ ಬಂದದೆ
ಅದೆಲ್ಲ ಹೊಳೆದ್ ಇಳಿನೀರ್।೨।
ಕಂದ । ಬೆರಳ್‌ಗ ಯಾಗೊಳು ಸಮಯಿಲ್ಲೆ.

ಮಕ್ಕಳಿಗೆ ಸಣ್ಣದರ್ಲೆ ಶ್ರೀಮಂತಿಕೆ, ಹಣ, ಆಸ್ತಿಗಳ ಮೋಹ ಬೆಳೆಯದ ತರ ಬುದ್ಧಿ ಹೋಳೊಕು. ಅವರಲ್ಲಿ ಅಂಥ ಆಸೆ ಹುಟ್ಟಿಸಿರೆ ಅವು ಅಡ್ಡ ದಾರಿ ಹಿಡ್ಯಕೂ ಸಾಕ್. ಆ ಎಚ್ಚರಿಕೆ ಈ ತ್ರಿಪದಿನ ತಿರ್ಲ್.

ಅವೂ ಒಳೊ ಇವೂ ಒಳೊ । ಕೈಲಿಕರಕನ ಎಲ್ಲವ್ ಒಳೊ
ನಮ್ಮ ತಲೆಗೆ ನಮ್ಮ ಕೈ ೨।
ಕಂದ । ಹಿರಿಯರ ಮಾತ್ ತಪ್ಪಲ್ಲ.

ಸಣ್ಣದ್ರಂದನೇ ಮಕ್ಕ ಸ್ವಾವಲಂಬಿಗ ಆಗಿ ಬೆಳೆವ ವಾತಾವರಣ ಕೊಡೊಕು.

ಹಂಗಾದರೆ ದೊಡ್ಡತಾಕನ ಎಷ್ಟೇ ಕಷ್ಟ ಬಂದರೂ ಎದ್ರ್‌ಸಿ ಗೆಲ್ಲುವ, ಆತ್ಮವಿಶ್ವಾಸ ಅವರಲ್ಲಿ ಕುದ್ರಿದೆ.

ಆ ಭಾಷೆ ಈ ಭಾಷೆ ಗುದ್ದಾಟ ಬೇಡ
ಎಲ್ಲಾ ಭಾಷೆಲೂ ರಸ ಉಟ್ಟು ೨।
ಕಂದ । ಯಾವ ಭಾಷೆನೂ ಕೀಳಲ್ಲ .

ಇಂಥ ಭಾವನೆನ ಮಕ್ಕಳ್‌ಲಿ ದೊಡ್ಡೊವು ಅಗತ್ಯವಾಗಿ ಬೆಳ್ಸೊಕು.
ಅದ್ರ ಬದ್ಲ್, ಬೇರೆ ಭಾಷೆಲಿ ಮಾತಾಡಿ, ಮಕ್ಕಳ ಭಾಷೆಯಲ್ಲದವರ ಹಂಗೆ ಮಾಡಿಕಾಗದ್.
ಭಾಷೆಲಿ ಮೇಲ್ ಕೀಳ್‌ಂತ ಹೇಳ್ವಂತದ್ ಇಲ್ಲೇ ಇಲ್ಲೆ. ಇದ್ ಸತ್ಯ.

ಹಸಿ ಮದ್ದ್ ಅರಿಯೊಕು । ಹಸಿ ಮದ್ದ್ ಕುಡಿಯೊಕು
ಹಳ್ಳಿದ್ ಮದ್ದ್ ಹಸಿಮದ್ದ್ ೨।
ಕಂದ । ಮನೆಕರೆಲಿರ್ದು ಹಸಿ ಮದ್ದ್

ನಾಟಿ ವೈದ್ಯಂತ ನಾವು ಏನ್ ಹೇಳ್ತಾ ಒಳೊ ಅದರ ನಮ್ಮ ಮಕ್ಕಳಿಗೆ ತಿಳ್ಸೊಕು.
ನಮ್ಮ ಹಿತ್ಲ್‌ಲೇ ಇರುವ ಮದ್ದ್‌ಗಳ ಮಹತ್ವ ಅವು ತಿಳ್ಸೊಕು.
ಎಂಥೆಂಥ ದೊಡ್ಡ ರೋಗಗಳಿಗೆ ನಮ್ಮಲ್ಲೇ ಮದ್ದ್‌ಇದ್ದ್, ನಾವು ಅದರೆಲ್ಲ ಇಂದ್ ಮರ್ತೇಬುಟ್ಟೊಳೊ.

ಹಣ್ಣ್ ಕೊಯ್ದುವೆ । ಕೊಯ್ದರ ತಿಂದವೆ
ತೇಗಿದ ಮೇಲೆ ತಿರಿಗೀವೆ ೨।
ಕಂದ । ಬುಡಕ್ಕೆ ಮಡ್ಗಿವೆ ಗರಗಸ

ಕೃತಜ್ಞತೆ ಗುಣನ ಬಾಲ್ಯಂದಲೇ ಮಕ್ಕಳ್‌ಲಿ ಬೆಳ್ಸೊಕು. ಉದಾರ್ಣೆ ಕೊಟ್ಟ್ ಹೇಳ್ರೆ ಮಾತ್ರ ಅವ್ಕೆ ಅರ್ಥ ಆದೆ. ಕೃತಜ್ಞತೆ ಒಂದು ದೊಡ್ಡ ಗುಣ. ನಾವ್ ಎಂದಿಗೂ ಕೃತಘ್ನರಾಕೆ ಆಗದ್‌ಂತ ಮಕ್ಕಳ ಮನ್ಸ್‌ನ ನಾಟಿಸೊಕಾದೆ.

ದುಡ್ಡವಂಗೆ ಸೋಲು, ಮೋಸ ಮಾಡ್ಡವನೇ ಗೆಲ್ಲುದೂಂತ ಹೇಳುದರ
"ಹುತ್ತ ಕಟಿದ್ದ್ ಯಾರೊ ಮಾಳಿ ಕೊರ್ದದ್ ಯಾರೊ

ವಾಸಕ್ಕೆ ಬಂದದ್ ಇನ್ಯಾರೊ ಬಿ।
ಕಂದ । ದುಡ್ಡವಂಗೆ ಯಾಗೋಳು ಬರಿ ಸೋಲು".

ಈ ತ್ರಿಪದಿಲಿ ಹೇಳ್ಯೊಳೊ. ಹಳ್ಳಿನೇ ಮೇಲುಂತ ಹೇಳುದರ

ಹಳ್ಳೀಲಿ ಹೊಳೆ ಉಟ್ಟು । ಹಳ್ಳೀಲಿ ಬೆಳೆಯುಟ್ಟು
ಹಳ್ಳೀಲಿ ಉಟ್ಟು ಶುಚಿಗಾಳಿ ಬಿ।
ಕಂದ । ಹಳ್ಳೀನೆ ಮೇಲು ಎಲ್ಲಕ್ಕು

ಈ ತ್ರಿಪದಿ ಹೇಳ್ದೆ. ಪ್ರಕೃತಿ ವಿಕೃತಿ ಆಗದೆ ಇರುದು ಹಳ್ಳಿಲಿ. ವಿಷ ಇಲ್ಲದ ಗಾಳಿ, ವಿಷ ಇಲ್ಲದ ಅನ್ನ ಹಳ್ಳಿಗಳದ್ದ್‌ಂತ ಮಕ್ಕಳಿಗೆ ಗೊತ್ತಿರೊಕು.

ಸರ್ವಜ್ಞನ "ಕೊಟ್ಟು ಬಣ್ಣಿಸಬೇಡ, ಕೊಟ್ಟಾಡಿಕೊಳಬೇಡ" ಪದ್ಯಕ್ಕೆ ಸರ್ಯಾಗಿ ಇರುವ ತ್ರಿಪದಿ ಇದ್

ಕೊಟ್ಟವ್ ಆಡ್ದುಲೆ । ಕೊಡದವರ್ದೇ ರಂಪ
ಲೊಟ್ಟೆ ಬುಟ್ಟವೆ ನೂರೆಂಟ್ ಬಿ।
ಕಂದ । ಲೋಕಕೆ ಗೊತ್ತುಟ್ಟು ಈ ಗುಟ್ಟು.

ಹಂಡೆ ಬಾಯಿ ಕಟ್ಟಕ್ಕ್, ದೊಂಡೆ ಬಾಯಿ ಕಟ್ಟಿಕೆ ಸಾಧ್ಯ ಇಲ್ಲೆಂತ ಹೇಳ್ವ ಗಾದೆ ಇಲ್ಲಿ ತ್ರಿಪದಿ ಆಗುಟು.

ನೋಡಿಕೆ ಬೆಳಿ ಮೋಡ । ಭೂಮಿಗೆ ಕರಿಮೋಡ
ಮಳೆ ಸುರೆಕೆ ಬೇಕ್ ಕರಿಮೋಡ ಬಿ।
ಕಂದ। ಕರಿಕಪ್ಪುತ್ತೇಳಿ ಜರಿಬೇಡ.

ಬೆಳಿ ಮೋಡ ನೋಡಿಕೆ ಪೊರ್ಲು. ಮಳೆ ಸುರ್ಸಿಕ್ಕೆ ಕರಿಮೋಡನೆ ಬೇಕ್ತ್ತೇಳಿ ಕಪ್ಪುನ ಒಪ್ಪುವ ಗುಣನ ಈ ತ್ರಿಪದಿಲಿ ಹೇಳ್ಯೊಳೊ.

ಇಂಥ ಹಲವಾರ್ ಸಮಾಜ ಮುಖಿ ನುಡಿ ಮುತ್ತುಗ ಇವರ ತ್ರಿಪದಿಗಳ್‌ಲಿ ಒಳೊ. ದ.ರಾ. ಬೇಂದ್ರೆಯವು "ಯಾರಿಗೂ ಹೇಳೋಣು ಬ್ಯಾಡಂತ " ಕೂಸಿನಕ್ಕಲೆ ಹೇಳ್ದರ ಈ ತ್ರಿಪದಿಗ ನೆನ್‌ಪಿಸಿವೆ.

ಇಂಥ ತ್ರಿಪದಿ ಸಾವಿರ ಆಗಲಿ, ಸಾವಿರದಾಗಲಿಂತ ಹಾರೈಸಿನೆ. ಸೋದರ ಜೋಯಪ್ಪನವರ ಸಾಹಿತ್ಯ ಸೇವೆ ಇನ್ನಷ್ಟ್ ಮುಂದುವರಿಯಲಿಂತ ಆಶಿಸಿನೆ.

ಜಯಮ್ಮ ಚೆಟ್ಟಿಮಾಡ

# ನನ್ನ ಮಾತ್

ಹದ್ನೈದ್ ಇಪ್ಪತ್ತು ವರ್ಷಗಳ ಹಿಂದೆ ಮಡಿಕೇರಿ ದಸರಾ ಸಮಿತಿಯವು ಬಹುಭಾಷಾ ಕವಿಗೋಷ್ಠಿ ನಡ್‌ಸ್ತಿದ್ದೊ. ಈಗಲೂ ನಡ್‌ಸ್ತಾವಲೊ. ಹಿಂದೆ ಅರೆಭಾಷೆಲಿ ಪದ್ಯ ಬರ್ದ್ ಓದವ್ ಇತ್ಲೆ. ಹಂಗಾಗಿ ನಾ ಬರ್ಯೆಕೆ ಸುರು ಮಾಡ್ದೆ. ಅದೇ ರೀತಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತ್‌ನ ಸಮಿತಿಯವೂ ಸನ ಬಹುಭಾಷಾ ಕವಿಗೋಷ್ಠಿ ನಡ್‌ಸ್ತಿದ್ದೊ. ಅದರ್‍ಲೂ ನಾ ಪದ್ಯ ಓದ್‌ತ್ತಿದ್ದೆ. ನೀವೂ ಬರೆನಿ, ಓದಿಕೆ ಬನ್ನಿತ ಕೆಲವ್‌ಕೆ ನಾನ್ ಹೇಳ್ತಿದ್ದೆ. ಗೋಷ್ಠಿಗಳ ನೆವನಲಿ ಬರೆಕೆ ಸುರು ಮಾಡ್ದ್ ಈಗ ಒಂದ್ ಪುಸ್ತಕ ರೂಪಲಿ ಬರುಷ್ಟ್ ಆತ್. ನಂಗೆ ಪ್ರೋತ್ಸಾಹ ಕೊಟ್ಟ ಆ ಎಲ್ಲಾ ಸಮಿತಿಯವುಕೆ ನಾ ಋಣಿ ಆಗೊಳೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವು ನಡ್ಸಿದ ಅಖಿಲ ಭಾರತ ಭಾಷಾ ಸೌಹಾರ್ದ ದಿನಾಚರಣೆ ಕವಿಗೋಷ್ಠಿ, ಮತ್ತೆ ಅದೆ ಇಲಾಖೆ ನಡ್ಸಿದ ವಸಂತೋತ್ಸವ ಕವಿಗೋಷ್ಠಿ, ಮತ್ತೆ ಕೊಡವ ಸಾಹಿತ್ಯ ಅಕಾಡೆಮಿ ಬೆಂಗಳೂರು ಇವು ನಡ್ಸಿದ ರಾಜ್ಯ ಮಟ್ಟದ ಕವಿಗೋಷ್ಠಿ ಮತ್ತೆ ರಾಜ್ಯಮಟ್ಟದ ಮೈಸೂರು ದಸರಾ ಕವಿಗೋಷ್ಠಿಲಿ ಅರೆಭಾಷೆ ಪದ್ಯ ಓದುವ ಅವಕಾಶ ನಂಗೆ ಸಿಕ್ತ್. ಅವಕಾಶ ಕೊಟ್ಟ ಅವುಕೆ ನನ್ನ ಕೃತಜ್ಞತೆಗ.

ಮಡಿಕೇರಿ ಆಕಾಶವಾಣಿಯ ಸ್ನೇಹಕಾವೇರಿ ಮತ್ತೆ ಉದಯರಾಗ ಭಕ್ತಿಗೀತೆ ಪ್ರಸಾರಲಿ ನನ್ನ ಪದ್ಯಗಳಿಗೆ ಪ್ರಸಾರದ ಅವಕಾಶ ಸಿಕ್ತ್. ಆಗ ನಿಲಯ ನಿರ್ದೇಶಕಿ ಆಗಿದ್ದ ಶ್ರೀಮತಿ ಇಂದಿರ ಗಜರಾಜ್ ಮತ್ತೆ ಒತ್ತಾಸೆ ಕೊಟ್ಟ ಶ್ರೀ ಸುಬ್ರಾಯ ಸಂಪಾಜೆ ಇವ್ಕೆ ನನ್ನ ಧನ್ಯವಾದಗ.ನನ್ನ ಕವನ ಸಂಕಲನ ಪ್ರಕಣೆಗೆ ಆಯ್ಕೆಮಾಡಿ ಪ್ರೋತ್ಸಾಹ ಕೊಟ್ಟ ಅರೆ ಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷರ್ ಮತ್ತೆ ರಿಜಿಸ್ಟ್ರಾರ್, ಆಯ್ಕೆ ಸಮಿತಿ ಮತ್ತೆ ಅಕಾಡೆಮಿನ ಎಲ್ಲಾ ಸದಸ್ಯರಿಗೆ, ಅಲ್ಲದೆ ಕರ್ನಾಟಕ ಸರ್ಕಾರಕ್ಕೆ ಧನ್ಯವಾದಗ.

'ತೋರಣಕ್ಕೊಂದು ರಂಗೋಲಿ'ತ್ತೇಳಿ ಅಭಿಮಾನಂದ ಈ ಪುಸ್ತಕಕೆ ಮೌಲ್ಯಯುತ ಮುನ್ನುಡಿ ಬರ್ದ ಸುಳ್ಯದ ಶ್ರೀಮತಿ ಜಯಮ್ಮ ಚೆಟ್ಟಿಮಾಡ ಇವುಕೆ ನನ್ನ ಕೃತಜ್ಞತೆಗ.

ಆಕರ್ಷಕ ಆಗಿ ಮುಖ ಪುಟ ವಿನ್ಯಾಸ ಮಾಡ್ದ ಡಾ। ಚರಿತ ಇವುಕೆ ನಾ ಋಣಿ ಆಗೊಳೆ. ನಂಗೆ ಸದಾ ಪ್ರೋತ್ಸಾಹ ಕೊಡುತ್ತಿರುವ ನನ್ನ ಹೆಣ್ಣ್ ಶ್ರೀಮತಿ ಭಾರತಿ, ಮಕ್ಕಳಾದ ದಿವ್ಯ, ದೀಪಕ್, ಅಳಿಯ ಶ್ರೀ ಜಯಪ್ರಕಾಶ್, ಪಿಳ್ಳಿ ಇಂಪನ,

ಅಕ್ಕ ಗೋಪಮ್ಮ, ಭಾವ ಪ್ರೊ ಶ್ರೀ ಗೋವಿಂದಯ್ಯ, ಸೋದರ ಅಳಿಯ ಚಿರಂತನ ಇವುಕೆ ನನ್ನ ಕೃತಜ್ಞತೆಗ.

ಪುಸ್ತಕ ಪ್ರಕಟಣೆಗೆ ಅನುಮತಿ ಕೊಟ್ಟ ಶಿಕ್ಷಣ ಇಲಾಖೆನ ಅಧಿಕಾರಿಗಳಿಗೆ, ಮತ್ತ್ ಮದೆ ಮಹೇಶ್ವರ ವಿದ್ಯಾ ಸಂಘದ ಆಡಳಿತ ಮಂಡಲಿಗೆ ನಾ ಋಣಿ ಆಗೊಳೆ.

ಮುದ್ರಕರಾದ ಶ್ರೀ ಕೃಷ್ಣ ಪ್ರೆಸ್‌ನ ಮಾಲೀಕರ್ ಮತ್ತ್ ಸಿಬ್ಬಂದಿ ವರ್ಗಕ್ಕ್ ನನ್ನ ವಂದನೆಗ. ನನ್ನ ಅಭಿಮಾನಿ ಬಳಗಕ್ಕೆ ಮತ್ತ್ ನನ್ನ ಪುಸ್ತಕನ ಓದಿಕೆ ಕುದ್ದ ನಿಮಿಗೆ ನನ್ನ ಕೃತಜ್ಞತೆಗ.

**ಬಾರಿಯಂಡ ಆರ್. ಜೋಯಪ್ಪ.**

**ಚರ ದೂರವಾಣಿ: 9481770584**

# ಒಳ ಪುಟಲಿ

# ಉದಯರಾಗಕ್ಕಾಗಿ

ಬೊಳಿ ಬುಡಕನ ಎದ್ದ್ ಗುಂಪು ಗುಂಪುಲಿ ತೇಲಿ
ಗದ್ದೆ ಬಯ್ಲ್‌ನ ಮುಟ್ಟಿ ಬೆಟ್ಟ ಕಾಡ್‌ನ ದಾಟಿ
ಹಾರಿ ಹೋದೊ ಕಾಣದ ಊರಿಗೆ ತೇಲಿ ಹೋದೊ

ಹತ್ತೂರು ಸುತ್ತೂರು ಹಕ್ಕಿಗಳ ಅನ್ನದೂರು
ದೂರ ದೂರದ ಊರ್ ಪರ ಊರ್
ಅಲ್ಲಿ ಕೇರಿ ಇಲ್ಲಿ ಕೇರಿ ಸಿಕ್ಕಷ್ಟ್ ಮೇಚಿ ಮಾಡಿ
ನಾಳೆ ಇದ್ದರೆ ಉಟ್ಟು ಅದೇ ಊರು

ಕತ್ತಲಾತ್ತ್‌ೇಳಿ ಕಲ ಕಲ ಸದ್ದ್ ಮಾಡಿ
ಕುದ್ದವ್ ಎದ್ದೊ ಊರ್ ಕಡೆಗೆ
ಅದೆ ಗದ್ದೆ ಅದೆ ಬಯ್ಲ್, ಅದೆ ಬೆಟ್ಟ ಅದೆ ಕಾಡ್
ದಾರಿ ತಪ್ಪದೆ ಹಾರ್ದೊ ಗೂಡ್ ಕಡೆಗೆ

ಕೊಂಬೆ ಉಂಬೆಲಿ ಕುದ್ದ್ ಸೊಪ್ಪು ಸೊಪ್ಪುನ ಮರೆಲಿ
ಕುದ್ದವ್ ಕುದ್ದಲ್ಲೆ ನಿದ್ದೆ ಹೋದೊ
ಮೈಗೆ ಮೈ ಅಂಟಿ ತಾಂಗಿ ಕುದ್ದವ್ ಅಲ್ಲೆ ಕನ್ಸ್ ಕಂಡೊ
ಉದಯರಾಕ್ಕಾಗಿ ಕಾದ್ ಕುದ್ದೊ

# ಯಜಮಾನಿಕೆ

ತಿಂಗ ತುಂಬಿ ತುಂಬಿದಂಗೆ ರಂಗ್ ಕಂಡಿಯ
ಜೀವ ಕೊಡುವ ದಿನದ ಕನ್ಸ್ ಕಂಡೇ ಕಂಡಿಯ
ಫಲ ತುಂಬಿದ ಮರದ ಹಂಗೆ ಪೊರ್ಲು ಕಂಡಿಯ
ತೆಳು ಗಾಳಿಗೆ ಜೂಂಗುವಂಗೆ ಮೆಲ್ಲ ನಡ್ದಿಯ
ಬೇನೆ ತಿಂದ್ ಹೊಸ ಜೀವಕೆ ಜೀವ ಕೊಟ್ಟಿಯ

ಹಣೆ ಮೇಲೆ ಮುತ್ತುನಂಗೆ ಬೆಗ್‌ರ್ ಮೂಡಿಟು
ಹೊಸ ಲೋಕದ ಗಾಳಿ ಬೆಳ್ಕ್‌ಗೆ ಸಾಕ್ಷಿಯಾಗುಟು
ಹಾಲ್ ಹೀಂಪಿ ಮುಲುಗುಟ್ಟಿದೆ ಜೀವಜೀವದ ಜೀವ
ಮೈ ನಿಮಿರಿ ಆಕಳ್ಸಿದೆ-ಯಾರೂ ಹೇಳ್ತ್‌ಲೆ ಕಂದಂಗೆ
ನಿದ್ದೆಲೂ ನಗೆ ಉಕ್ಕಿದೆ ಗುಳಿ ಕೆನ್ನೆ ಕೂಸಿಗೆ

ಯಾರೊ ಜಿಂಟಿದಂಗೆ ಮರ್ಟದೆ ಮೊಕ ಹಿಂಡಿ ಒಮ್ಮೆಗೆ
ಕೆಲ್ಸ ಬುಟ್ಟದೆ ಅಯ್ಯೆ ಬಂದದೆ ತೆತ್ತಿಕಂಡದೆ ಕೂಸುನ
ಮನೆವೆಲ್ಲವು ಎಚ್ಚರಿರೊಕು ಕೂಸುದೆ ಯಜಮಾನಿಕೆ

# ಬಾಲ್ಯ

ಹೊತ್ತ್ ಗೊತ್ತು ಒಂದೂ ಇಲ್ಲೆ ಮಕ್ಕಳಾಟಕೆ
ಮಳೆ ಬಿಸ್ಲ್ ಗನ್ನೆ ಇಲ್ಲೆ ಅವರ ಕೂಟಕೆ
ಆಟ ಸಾಕ್ ಊಟ ಬೇಕ್ ಯಾರು ಕೇಳ್ದುಲೆ
ಮಣ್ಣ್ ಧೂಳು ಕಸ ಕಡ್ಡಿ ಒಂದೂ ಗೊತ್ತ್‌ಲೆ
ಹಳ್ಳ ದಿಣ್ಣೆ ಗೊಸ್ರ್ ತೋಡು ಇಳ್ದ್ ಓಡಿವೆ
ಬರೆ ಬಾಮಿ ಹೊಳೆ ಕೆರೆ ಬಗ್ಗಿ ನೋಡಿವೆ
ಹಾರಿ ಬಿದ್ದ್ ಈಜಿ ಮುಳುಂಗಿ ಬಿಸ್ಲ್ ಕಾದವೆ
ಗುಂಪು ಕೂಡಿ ಹಾರಿ ಕೊಣ್ದ್ ಕುಸಿಪಟ್ಟವೆ
ಬಂಡೆ ಜಾರಿ ಮರ ಹತ್ತಿ ಹಣ್ಣ್ ಕೊಯ್ದವೆ
ತರ್‌ಚ್ ಗಾಯ ಲೆಕ್ಕ ಇಲ್ಲೆ ಜಾರಿ ಬಿದ್ದವೆ
ಗೋಲಿ ಬುಗುರಿ ಚಿಣ್ಣಿ ಕೋಲು ಆಟ ಆಡಿವೆ
ಪೀಪಿ ಊದಿ ಸೀಪುಳಾಕಿ ಕುಸಿಪಟ್ಟವೆ
ಹಗ್ಗ ಕಟ್ಟಿ ಉಯ್ಯಾಲಾಡಿ ಬೊಬ್ಬೆ ಹಾಕಿವೆ
ಕವಣೆ ಕಲ್ಲ್ ಬೀಸಿ ಹೊಡ್ದ್ ಗುರಿ ಕಲ್ತವೆ
ಹೊತ್ತ್ ಮೀರಿ ಮೆಲ್ಲ ಮೆಲ್ಲ ಮನೆಗೆ ಹೊರ್ಟವೆ
ಇಂದ್ ?
ಬಾಲ್ಯ ಮರ್ತ್ ಎಲ್ಲಿ ಹೋತು?
ಕುದ್ದ್ ಗ್ಯಾನ ಮಾಡಿವೆ !

# ನಾಳೆನೂ ಇರೊಕು

ಕೋಟಿ ಮಕ್ಕಳ ಹೊತ್ತ್ ತಿರ್‍ಗಿಯ
ಬೇನೆ ಮರ್‍ತ್ ನೀನ್
ಹೊತ್ತ್ ಹೊತ್ತಿಗೆ ತುತ್ತು ಕೊಟ್ಟಿಯ
ಅಕ್ಷಯ ಪಾತ್ರ ನೀನ್
ನಿತ್ತ್ ಗೊತ್ತ್‌ಲೆ, ನಿತ್ಯ ತಿರ್‍ಗಿಯ
ಬಚ್ಚಿರೂ ಬಾಯಿ ಬುಡುದುಲೆ
ಹೊಟ್ಟೆಲುಟ್ಟು ಧರ್ಮಸಂಕಟ
ಹೇಳಿಕಾಗದ ತಳಮಳ
ಹೊಗೆ ಎದ್ದದೆ ಬೂದಿ ಉಗ್ದಿಯ
ಲಾವ ಹರ್ದದೆ ರವರವ
ಕಲ್ಲ್ ಕಬ್ಬಿಣ ಲೆಕ್ಕಕಿಲ್ಲೆ
ಚಂಡ ಮಾರುತದಬ್ಬರ
ಗಾಳಿಯೊಟ್ಟಿಗೆ ನೀರ್ ಸುತ್ತಿದೆ
ಎಲ್ಲ ಬುಡ ಮೇಲಾದವೆ
ರಣ ಅಲೆಗ ನುಗ್ಗಿ ಬಂದವೆ
ನುಂಗಿ ಹಾಕಿವೆ ಎಲ್ಲನೂ
ಬೆಟ್ಟ ಜಾರ್‍ದೆ ಬಂಡೆ ಉರ್‍ಂಡಿದೆ
ಒಮ್ಮೆ ಮೈ ಕೊಡ್ಕಿರೂ
ಏನ್ ಎಂತಾತೇಳ್ಕೆ ಮುಂದೆ
ಸರ್ವ ನಾಶ ಆದವೆ
ಅಮ್ಮ ತಾಯಿ ಭೂಮಿ ದೇವೀ...
ಅಂದೂ ಇದ್ದ ಇಂದೂ ಒಳ
ನಾಳೆನೂ ಇರೊಕು ನೀನ್
ಭೂಮಿ ತಾಯಿತ್ತೇಳಿ ಕರೆಕೆ
ಇರೊಕು ನಾವು ನೀವು ಎಲ್ಲವೂ

# ಬರ

ಒಂಟಿ ಮನೆಗೆ ಒಂಟಿ ದೀಪ ಸುತ್ತಮುತ್ತ ಕಾಡ್
ಆನೆ ಹುಲಿ ಕಾಟಿ ಕಡವೆ ಇದ್ದ ದೊಡ್ಡ ಕಾಡ್
ಇವ್ಕೆ ಇವು, ಅವ್ಕೆ ಅವು ಬಾಳ್‌ತಿದ್ದೊ ಅಂದ್
ಹಸ್ರುಕ್ಕಿ ಕಾಂಬತಿತ್ತ್ ಸುತ್ತ ಮುತ್ತ ಅಂದ್
ನಾರೆ ಗೆಣ್ಸ್  ಅಕ್ಕಿ ಗೆಣ್ಸ್ ತೀನ ಗೆಣ್ಸ್ ಇತ್ತ್
ಸೊಪ್ಪು ಸದೆ, ಕಣಿಲೆ ಅಳುಂಬು, ಕಾಡ್ ಜೇನ್ ಇತ್ತ್
'ತೆಕ್ಕೋ ತೇರ್  ತೆಕ್ಕ್ ' ಕಾಡ್ ಕೋಳಿ ಕೂಂಗ್‌ತಿತ್ತ್
ತನ್ನದೇ ಕಾಡ್‌ತ್ತೇಳಿ ರೆಕ್ಕೆ ಬಡ್ದ್ ಹಾರ್‌ತಿತ್ತ್

ಯಂತಕ್ಕೇನೋ ! ಮಳೆಗಾಲ ಇಲ್ಲದಾತ್

ಇಂದ್ ಬಾದು, ನಾಳೆ ಬಾದು, ಊಹುಂ ! ತೊಟ್ಟು ಮಳೆ ಇಲ್ಲದಾತ್
ನೆಲಪೂರ ಗಾರ್‌ಬಂದ್ ಬಾಯಿ ಬುಟ್ಟ್ ನಿತ್ತತ್
ಅದೂ ಒಣ್‌ಂಗಿ, ಇದೂ ಒಣ್‌ಂಗಿ ಕಾಡ್‌ಪೂರ ಒಣ್‌ಂಗಿತ್
ಎಳ್ಳಿರಲ್ಲ ಬಗ್ದರಲ್ಲ  ಪಸೆ ಗುರ್ತೇ ಇಲ್ಲದಾತ್
ಕಾಡ್‌ಗೆಲ್ಲ ನಾಡ್‌ಗೆಲ್ಲ ಬರಗಾಲ ಬಂದೇ ಬಾತ್
ಜೋಳ ರಾಗಿ ತೀರಿ ಹೋತು, ಮಡ್ಕೆ ಪೂರ ಕಮ್ಚಿ ಬೀತ್

ಕೆಲ ಜನಗ ಹೊರ್‍ಟೊ ನೋಡಿ ಬೆದ್ರಕ್ಕಿ ಹುಡ್ಕಿಕೆ
ಕೊಟ್ಟ್ ತಕ್ಕಂಡ್ ಹೊರ್‍ಟೊ ಕೆಲವ್ ಕಾಡ್‌ಗೆಣ್ಸ್ ಎಳ್ಳಿಕೆ
ಹಸ್ರುಕ್ಕಿದ ಕಾಡ್‌ಲಿ ಮೇವಿಲ್ಲದ ಸಂಕಟ
ಜಾತಿಗೆಲ್ಲ ಛಿದ್ರ ಆದೊ ಹುಲ್ಲು ನೀರ್ ಇಲ್ಲದೆ

ರಣ ಬಿಸ್ಲ್, ಬಿಸಿಗಾಳಿ ಒಣ್‌ಂಗಿ ನಿತ್ತ ಕಾಡ್‌ಗೆ
ಬಿದ್ದೇ ಬೀತ್ ಕಾಡ್ಗಿಚ್ಚ್ ಧಗಧಗಿಸಿ ಹೊತ್ತಿತ್
ಆಳುದ್ದ, ತೇರುದ್ದ ಮರದುದ್ದ ಎದ್ದ ಕಿಚ್ಚ್
ಕಾಡ್‌ನೆಲ್ಲ ಉಂಡ್‌ತಿಂದ್ ಉಬ್ಬಸಂದ ತೇಗಿತ್

# ದನಗಳ ಶಿಸ್ತ್

ಬೆಟ್ಟ ಕಾಡ್‌ನ  ಸುತ್ತಿ ಗದ್ದೆ ಬಾಣೆಲಿ ಮೇದ್
ಕೊಲ್ಲಿ ತೋಡ್‌ಗೆ ಇಳ್ದ್ ನೀರ್ ಕುಡ್ದೊ
ಮರ ಮರಕೆ ಮೈ ಉಜ್ಜಿ
ಹಣೆ ಹಣೆಗೆ ತಲೆ ಕೊಟ್ಟ್
ಗುದ್ದಾಟ ಮಾಡಿ ಚುಳ್ಳಿ ಕೊಣ್ದೊ

ಗುಂಪು ಗುಂಪುಲಿ ಕೂಡಿ
ಮೊಕ ನೆಕ್ಕಿ ಮೈ ನೆಕ್ಕಿ
ಐಲಾಟ ಆಡಿ ಕುಸಿಪಟ್ಟೊ
ಬಿಸ್ಲ್‌ಲಿ ಸುಸ್ತಾಗಿ
ನೆರ್‌ಳ್‌ಲಿ ಮಲ್ಗಿ
ಮೈ ನಿಮಿರಿ ಹೊರ್‌ಟೊ ಹಣ್ಣ್ ಮರಕೆ

ಅಂಬಟೆ ಮರ ಗೊತ್ತು, ಕುಂಬುಳಿ ಮರ ಗೊತ್ತು
ನೆಲ್ಲಿ ಮರಗೊತ್ತು ದನಗಳಿಗೆ
ಕೂಮೆ ಮರ ಸುತ್ತಿ,  ಕಾರೆ ಮರ ಸುತ್ತಿ
ಎಲ್ಲಾ ಕೂಡಿ ಹೊರಟೊ ಹಟ್ಟಿ ಕಡೆಗೆ

ಕಾಡ್‌ಮೇಡ್‌ನ ಸುತ್ತಿ ಹುಲ್ಲು ಸೊಪ್ಪುನ ಮೇದ್
ಸಾಲಾಗಿ ಹೊರ್‌ಟೊ ಹಟ್ಟಿ ವರೆಗೆ
ಹೊತ್ತ್ ಕಂತಿಕೆ ಮುಂದೆ ಬಂದೊ ಹಟ್ಟಿ ಒಳಗೆ

ಕಟ್ಟುವ ಕಡೆಲೆಲ್ಲ ಶಿಸ್ತಾಗಿ ನಿತ್ತ್
ಬುಸ್ಸೋತ ಉಸ್ರಾಡಿ ಮಲ್ಗಿಬುಟ್ಟೊ
ಹುಲ್ಲು ಮುದ್ದೆನ ಅಗ್ದ್  ಹಣ್ಣ್ ಬೀಜನ ಉಗ್ದ್
ಆಗೊಮ್ಮೆ ಈಗೊಮ್ಮೆ ಕೆಮಿ ಆಡ್ಸಿದೊ
ನಿದ್ದೆಗೆ  ಶರಣಾಗಿ ಗೊರಕೆ ಹೊಡ್ದೊ

# ಕಡಿಕೆ

ಅಂದ್ ಜನ್ನ ಕವಿ ಹೇಳ್ತ್
'ನಾವ್ ಮಾಡ್ದ ಅಡ್ಗೆನ ನಾವೇ ಉಂಬೊಕು'
ಹೌದು,
ಉಪ್ಪೊ ಚಪ್ಪೆಯೊ ಉಣದೆ ನಿಮೂರ್ತಿಯಿಲ್ಲೆ
ಲಾಯ್ಕಿಲ್ಲೆತ ಹೇಳಿಕಂಬಕೆ ಆದುಲೆ
ಅದ್ ನಾವೇ ಮಾಡ್ದ ಅಡ್ಗೆ – ಹೇಳಿಕಂಬೊದು ಹೆಂಗೆ ?

ಕಡಿಕೆಗೆ ಅಡಿಯಿಲ್ಲೆ
ತುಂಬಿರೆ ತುಂಬಿಕಂಡದೆ ಎಲ್ಲಾ
ಶರೀರನೂ ಹಂಗೆ ಅಡಿಯಿಲ್ಲದ ಕಡಿಕೆ
ಹೊತ್ತ್ ಹೊತ್ತಿಗೆ ತುಂಬಿರೆ ತುಂಬಿಕಂಡದೆ– ನಿಲ್ಲುದುಲೆ ಅಲ್ಲೆ !
ಬಾಯಿ ರುಚಿ ಕೇಳ್ದೆಃ
ಅದ್ ತಿಂದಾ, ಇದ್ ತಿಂದಾ? ಬಾಚಿ ಬಾಚಿ ತಿಂದಾ ?
ರುಚಿ ಹೇಳ್ದೆಃ
ತಿಂದಷ್ಟ್ ಸಾಲ್ದ್, ಮತ್ತೆ ಮತ್ತೆ ತಿನ್ನ್ –ರುಚಿ ರುಚಿದ್ ತಿನ್ನ್
ಉಡುವಲ್ಲಿ ಉಡು, ತಿನ್ನುವಲ್ಲಿ ತಿನ್ನ್, ಕೂಡುವಲ್ಲಿ ಕೂಡು
ಅಡ್ಡ ದಾರಿನೊ, ಉದ್ದ ದಾರಿನೊ– ಮಾಡ್ ಸಂಪಾದನೆ
ಮನ್ಸೊ ಕೊಣ್ದದೆ ರುಚಿಗೆ ತಕ್ಕಂಗೆ ! !
ಕೆನೆ ಹಾಲಿಗೆ ಉಟ್ಟು ಮಂದ ಮೊಸ್ರದ್ ಗುಣ
ಮಂದ ಮೊಸ್ರಲಿ ಉಟ್ಟು ಹಿಡಿ ಬೆಣ್ಣೆ
ಕಾಸಿರೆ ?
ಆ ಹಾ! ಗಮಗಮಾ ತುಪ್ಪ
ನಮ್ಮ ಬದ್ಕ್ ಇರೊಕು
ಕೆನೆ ಹಾಲ್‌ನಂಗೆ, ಗಮ ಗಮಾ ತುಪ್ಪದಂಗೆ.

# ಜೋಡಿ ಹಕ್ಕಿಗ

ಕಂದಿ ಕುಂದಿ ನೊಂದ್ ಬೆಂದ್
ಅಪ್ಪಂಗಾತ್ ಎಂಬತ್ತ್
ಅವ್ವಂಗಾತ್ ಎಪ್ಪತ್ತ್
ಪಿಲ್ಸ್ ನುಂಗದೆ ಸೂಜಿ ಹಾಕದೆ
ಇನ್ನೂ ಒಳೊ ಗಟ್ಟಿಮುಟ್ಟ್
ಹೊತ್ತಿಗೆ ಮುಂದೆ ಎದ್ದದೆ ಅಪ್ಪ
ಗದ್ದೆನೆಲ್ಲ ಸುತ್ತಿ ಬಂದದೆ
ಇನ್ನೂ ತಿಂದದೆ ನಾಕ್ರೊಟ್ಟಿ
ಕನ್ನಡ್ಕ ಹಾಕದೆ ಓದಿಕೆ ಕುದ್ದರೆ
ಓದಿಯೇ ಓದಿದೆ, ಏನೀ ಗುಟ್ಟು?
ಹಗ್ಲ್ ಹೊತ್ತ್‌ಲಿ ಮಲ್ಗಿಕೆ ಬತ್ತ್
ಹಿರಿಯರ ಮುಂದೆ ಕಾಲಾಡ್ಸಿಕೆ ಬತ್ತ್
"ಧಂ" ಹೊಡೆದು ಬತ್ತೇ ಬತ್ತ್
ಕೊಡಿ ಕೊಡಿ ತಿಂಬೊದು ಕಾಂಬಕೆ ಬತ್ತ್
ರೂಲ್ಸ್ ಮಾಡಿಟ್ಟು ನಮ್ಮಪ್ಪ
ಗೇಂಟಿ ಕಟ್ಟಿ ನೆರಿಗೆ ಬುಟ್ಟ್
ಬರಿ ಕಾಲ್‌ಲಿ ನಡ್ಡದೆ ನಮ್ಮವ್ವ
ಸುರಾಲ್ ಕೋಸಿ ಕೋಟು ಹಾಕಿ
ಬೂಟ್ ಮೆಟ್ಟಿದೆ ನಮ್ಮಪ್ಪ
ಅವ್ವನೂ ಅಪ್ಪನೂ ಸಂತೆಗೂ ಹೋದವೆ
ಅಪ್ಪನೂ ಅವ್ವನೂ ಜಾತ್ರೆಗೂ ಹೋದವೆ
ಜೋಡಿ ಹಕ್ಕಿಗ ಕೂಡಿ ಹಾಡಿವೆ
ಇಂಥಾ ಪೊರ್ಲು ಎಲ್ಲಿಗಂಟಾ ?

# ಕೊಡ್‌ಗ್ ಹೆಂಗುಟ್ಟು?

ಸಣ್ಣ ಕೊಡ್‌ಗ್ ಹೌದು ನೋಡಿ, ತಂಪು ಕೊಡ್‌ಗ್ ಅಲ್ಲ

ಕಾಡ್‌ಪೂರ ತೆಳ್ಳಂಗಾತ್, ಹುಳಿ ಯಾಲ ಇಲ್ಲದಾತ್
ಕಾಟಿ ಆನೆ ನುಗ್ಗಿ ಬಾತ್, ಬೆಳ್ದದೆಲ್ಲ ತಿಂದ್ ಹೋತ್
ಬತ್ತ ಹೋತ್, ಶುಂಠಿ ಬಾತ್
ಗದ್ದೆ ಮೇಲೆ ಪ್ರೀತಿ ಹೋತ್
ಸಣ್ಣ ಕೊಡ್‌ಗ್ ಹೌದು ನೋಡಿ, ತಂಪು ಕೊಡ್‌ಗ್ ಅಲ್ಲ
ದನಕರ್ ಕೊಟಗೆಲಿಲ್ಲೆ
ಗಿಣ್ಣ್ ತಿಂಬ ಭಾಗ್ಯ ಇಲ್ಲೆ
ಮಕ್ಕ ಪೂರ ಓದಿಕ್ಕೋದೊ
ದೇಶ ಬುಟ್ಟ್ ಕೆಲ್ಸಕ್ಕೋದೊ

ಅಪ್ಪ ಅವ್ವ ದಾರಿ ನೋಡಿ ಮೊಕ ಬಾಡಿ ಕುದ್ದ್ ಹೋದೊ
ನೋಡಿಕೆ ಬಾರಿ ಪೊರ್ಲು, ಒಳಗೊಳಗೆ ಸಂಕಟ
ನೆಟಿಕೆ ತೆಗೆವ ದೊಡ್ಡ ಮರ ಬಿದ್ದ್ ಹೋದೆ ಖಂಡಿತ
ಹೊಟ್ಟೆ ಒಳಗೆ ಸಳಿ ಕುದ್ದ್ ಸಣ್ಣಂಗೆ ನಡ್‌ಗಿದೆ
ಜರ ಬುಟ್ಟ್ ಬಂದಂಗೆ ಸುಸ್ತಾಗಿ ಕಂಡದೆ

ಯೋಜನೆಗಳ ಬೆನ್ನ್ ಹತ್ತಿ ಎಲ್ಲಿ ಉಟ್ಟೊ ಬೀಳಿಕೆ
ನಮ್ಮ ಕೊಡಗ್ ನಮಿಗೆ ಬೇಕ್ ಮಕ್ಕ ಮರಿ ಬಾಳಿಕೆ

ಕಾವೇರಿ ತೀರ್ಥ ಅದ್, ಅಮೃತದ ಅಕ್ಷಯ
ಕೆಂಪಾಕೆ ಬತ್ತ್ ಅದ್, ಪನ್ನೀರಾಗಿ ಹರಿಯೊಕು
ಒಂದಾಗಿ ಬಾಳಿ ನಾವ್ ವಿಶ್ವ ಮಾನ್ಯ ಪಡಿಯೊಕು

# ಪಂಜರ

ಗರಿ ಕಿತ್ತ ಮೇಲೆ ಹಕ್ಕಿ ಹಾರ್ದುಲೆ
ಇನ್ನ್ ಪಂಜರದ ಹಕ್ಕಿ?
ಅದ್ ಗೂಡೂ ಕಟ್ಟುದುಲೆ, ಕಾಪೂ ಕೂರ್ದುಲೆ
ಬೆಟ್ಟ ಗುಡ್ಡ, ಹೊಳೆ ಕೆರೆ,
ಮರ ಕೊಂಬೆ, ಹೂವು ಹಣ್ಣ್
ಎಲ್ಲಾ ಅಲ್ಲೇ ಪಂಜರದ ಒಳಗೇ
ಪಂಜರದ ಹಕ್ಕಿ ಹಾರ್ದುಲೆ ಹಾಡ್ದೆ!
ಹಾಡಲ್ಲ ಅದ್, ಶೋಕ ಗೀತೆ!
ಶಾಪ ಅಲ್ಲದೆ ಮತ್ತೆಂತ?

ಅದೋ ಅಲ್ಲಿ ನೋಡಿ!
ಅದ್ ಪಂಜರದ ಪ್ರಾಣಿ
ಹುಲಿನೋ, ಸಿಂಹನೋ– ಮತ್ತೊಂದೋ
ಹೊಸ ಗಾಳಿ, ಮಳೆ ಹನಿಯ ರೋಮಾಂಚನ ಅದ್ಕೆ ಇಲ್ಲೆ
ಓಟ ಆಟ ತುಂಟಾಟ ಪಂಜರದೊಳಗೇ
ಅಲ್ಲೇ ಪಂಜರದೊಳಗೇ ನಡ್ದ್ ನಡ್ದ್ ಸುಸ್ತಾಗಿ ಬಿದ್ದ್‌ಕಂಡದೆ
ಅರೆ ಹೊಟ್ಟೆಯೊ, ಬರೀ ಹೊಟ್ಟೆಯೋ
ಕೊಟ್ಟರೆ ತಿಂದದೆ, ಇಲ್ಲರೆ ಸಂಕಟಪಟ್ಟದೆ
ದೊಂಡೆಯೊಳಗೇ ಗುರುಗುಟ್ಟಿದೆ
ಮನ್ಸನ ಮಜಾ ನೋಡಿ ಕಟಕಟಾತ
ಹಲ್ಲ್ ಕಚ್ಚಿದೆ ಕಣ್ಣ್ ಮುಚ್ಚಿದೆ!
ನಾವು?
ನಮ್ಮದೇ ಪಂಜರದೊಳಗೆ
ಅರ್ಚಿಕಂಡ್, ಕಿರ್‌ಚಿಕಂಡ್, ಪರ್ಚಿಕಂಡ್
ಹೀನ ಮಾನವರಂಗೆ ಗುದ್ದಾಡಿ ಸತ್ತವೆ.

# ತಲೆಗೆ ಬಿದ್ದ ನೀರ್.....

ಮಕ್ಕ ಮರಿಗಳ ಕೈಲಿ
ಗೋಲಿ ಬುಗುರಿ ಇಲ್ಲೆ
ಬ್ಯಾಗ್ ಜೋಬುಲಿ ಎಂತುಟ್ಟು ನೋಡಿ!
ಪುರುಸೊತ್ತು ಇಲ್ಲೆ ನೋಡಿಕೆ ಕೇಳಿಕೆ.
ದುಡ್ಡು ಕೊಟ್ಟನೆ–ಏನಾರ್ ಮಾಡಿಕ–ಹಿಂಗೆ ಹೇಳಿರೆ ಹೆಂಗೆ?

ಗಿಡಾಗಿ ಬಗ್ಗದ ಮೇಲೆ ಮರಾಗಿ ಬಗ್ಗಿದೆನಾ?
ಬುದ್ಧಿ ಹೇಳಿದ್ದರೆ ಅಂದ್
ಹಿಂಗಾತಿತ್ತ್‌ಲೆ ಇಂದ್
ಹೆತ್ತವರ ತಿರ್‌ಗಿ ಕೇಳಿವೆ– ಹೇಳಕಾಗಿತ್ತ್ ಅಂದ್!!
ತಲೆಗೆ ಬಿದ್ದ ನೀರ್ ಕಾಲಿಗೆ ಬಿದ್ದದೆ
ಜಾರಿ ಬೀಳಿಕೆ ಮುಂದೆ ಎಚ್ಚರಾಕು
ಗೋಚರ ಇಲ್ಲರೆ ಜಾರಿ ಬಿದ್ದವೆ ನಾವ್

ಮಾಡಿ ಮಡ್ಗಿದ ಸೊತ್ತ್ ಮೂರ್ ಹೊತ್ತ್‌ಗೇ ಆತ್
ನಾಳೆನೂ ಉಟ್ಟು ಮೂರು ಹೊತ್ತ್
ನೂಕಿ ಬಾಳ್ದು ಹೆಂಗೆ?

# ಎದೆಯುಬ್ಬಿ ನಿಲ್ಲೊಕು

ಕೈ ತುಂಬ ಹಣ
ಹೊಟ್ಟೆ ತುಂಬ ಊಟ
ಮೈ ತುಂಬ ಬಟ್ಟೆ ಭಾಗ್ಯದ ಪೊಲ್ರ್
ಬಾದು
ಯಾಗ?
ಅಲ್ಲಿ " ಬಫರ್ ಜೋ಼ನ್"
ಇಲ್ಲಿ " ಹೈಟೆನ್ಶನ್"
ಸುತ್ತಾಮುತ್ತ " ಸೂಕ್ಷ್ಮವಲಯ"

ಬೆಟ್ಟ ಗುಡ್ಡ ನಾಡೆಲ್ಲ ಕಾಡ್
ಆನೆ ಹುಲಿಗಳ ಕೊಣ್ತ
ವರ್ಷದ ಅನ್ನ " ಕಾಡ್‌ಪಾಲ್"!
ಅತಿಯಾದರೆ ಗತಿಯಿಲ್ಲೆ
ಮಿತಿ ಬೇಕ್ ಎಲ್ಲ!

ಇಷ್ಟೇ ಇಷ್ಟಗಲದ ಕೊಡ್‌ಗ್
ದುಗುಡ ದುಮ್ಮಾನದ ಬೆಡ್‌ಗ್
ಎದೆಯುಬ್ಬಿ ನಿಲ್ಲೊಕು ನಮ್ಮ ಕೊಡ್‌ಗ್

# ಬಿಸಿ ತುಪ್ಪ

ಕಾಸ್ ಕೊಟ್ಟಾತ್ ಭಂಗಿ ಸುಟ್ಟೋತ್.
ಯಾರ್ನ ದೂರುದು ದೊಡ್ಡಣ್ಣ ?
ಆರಕೂ ಏರದೆ ಮೂರಕೂ ಇಳಿಯದೆ
ಕುದ್ದುಟು ನೋಡಿ ತಿಮ್ಮಣ್ಣ
ಗಟ್ಟಿ ಇದ್ದರೆ " ರೊಟ್ಟಿ" ಕಡೆ
ಮೆತ್ತಂಗೆ ಇದ್ದರೆ "ದೋಸೆ" ಕಡೆ
ನೀವು ಸೇರುದು ಯಾವ ಕಡೆ?

ದೊಂಡೆಲಿ ಉಟ್ಟು ಬಿಸಿ ತುಪ್ಪ
ಉಗ್ದರೆ ಹೋತು ಆ ತುಪ್ಪ
ನುಂಗಿರೆ ಅಂವ ಬರಿ ಬೆಪ್ಪಾ!

ಬಂದೇ ಬುಡ್ತ್ ಬರಗಾಲ
ಇದರ್ನೇ ಹೇಳುದು ಶನಿಗಾಲ
ಉಂಬೊದು ಬುಡೊನೊ ಮೂರ್ಹೊತ್ತು
ತಿಂಬೊನೊ ಇನ್ನ್ ಒಂದ್ಹೊತ್ತು
ಅಜ್ಜ ಹೇಳಿಟು ನಾ ಹೋನೆ
ಅಜ್ಜಿ ಹೇಳ್ತ್ ನಾ ಬನ್ನೆ....

# ಸೂರ್ಯ ಇಲ್ಲರೆ!

ಅಲ್ಲಿ ಸಳಿ ಸಳಿ ಇಲ್ಲಿ ಸಳಿ ಸಳಿ
ಎಲ್ಲಿ ಹೊಕ್ಕರೂ ಸಳಿ ಸಳಿ
ಮಕ್ಕ ಮರಿತ ಲೆಕ್ಕ ಇಲ್ಲದೆ
ಸುತ್ತಿಕಂಡದೆ ಈ ಸಳಿ
ಹೊಟ್ಟೆಲಿರುವ ಕೂಸೂ ನಡ್ಗಿದೆ
ತಡೆಕಾದುಲೆ ಹಾಳ್‌ಸಳಿ
ಬಾಯಿ ಬುಡಿಕೂ ಕಷ್ಟ ಆದೆ
ಹಲ್ಲ್ ಪೂರ ಕಟಕಟ
ಕರಳ್ ಪೂರ ಗಂಟ್ ಆದೆ
ಎಲ್ಲಿ ಇತ್ತೋ ಈ ಸಳಿ
ಉಸ್ರು ಬುಟ್ಟರೆ ಎಳೆಕಾದುಲೆ
ನುಗ್ಗಿ ಬಂದದೆ ಮಾರಿ ಸಳಿ
ರಕ್ತ ಪೂರ ಗಟ್ಟಿಯಾದರೆ
ಸಾಯೊದಂತೂ ಖಂಡಿತ
ನೀರ್ ಎಲ್ಲಾ ಕಲ್ಲ್‌ಗಟ್ಟಿರೆ
ನೀರ್ ಹರ್‍ಯೊದು ಮರ್ತದೆ
ಜಾತಿ ಧರ್ಮದ ಲೆಕ್ಕ ಇಲ್ಲದೆ
ಸುತ್ತಿ ಬಂದದೆ ಈ ಸಳಿ
ಮೇಲ್‌ಕೀಳ್ ಅದ್ಕೆ ಗೊತ್ತ್‌ಲೆ
ಎಲ್ಲ ಸಮ ಸಮ ಕಂಡದೆ
ಬೀಸಿ ಬಂದದೆ ಕೋಟ ಗಾಳಿ
ಯಮನ ಮೊಕ ಅರ್‌ಳಿದೆ
ಕಣ್ಣ್ ಮುಚ್ಚಿ ಗ್ಯಾನ ಮಾಡಿರೆ
ಕಾಂಬೊದು ಬರಿ ಕತ್ತಲೆ
ಬೆಳ್ಕ್‌ನೊಟ್ಟಿಗೆ ಬಿಸಿಯೂ ಬೇಕ್
ಸೂರ್ಯ ಇಲ್ಲರೆ ಸತ್ತವೆ
ಭೂಮಿ ಪೂರ ಹಿಮದ ಕಲ್ಲ್
ಜೀವ ಸೃಷ್ಟಿ ಯಾಗೊಳೊ?

# ಸುಕತ್ತೇಳ್ದ

ಹಸ್ರುಟ್ಟ ಬೆಟ್ಟಕ್ಕೆ ಹಕ್ಕಿಗಳ ಮಣಿಸರ
ಮುತ್ತಿಕ್ಕಿ ಕುಸಿಪಡುವ ಮೋಡಗಳ ವೈಯ್ಯಾರ
ಮಳೆ ಬೀಳುವ ಹೊತ್ತಿಗೆ ನವುಲುಗಳ ಕೊಣ್ತ
ಧುಮುಧುಮುಕಿ ಹರ್ದದೆ ಹಾಲಂಗೆ ನೀರ್
ಬೆಟ್ಟಗುಡ್ಡದ ನೀರ್ ಥಳ ಥಳ ಪನ್ನೀರ್

ಚಿಕ್ಕಾದ ನೂಲುನ ಬಿಚ್ಚೊಕು ಜಾಣ
ಯಾಗೊಳು ಇರ್ದುಲೆ ಹುಣ್ಣಮೆ ಬೆಳ್ಕ್
ಸುಕತ್ತೇಳ್ದ " ಅಷ್ಟಿಷ್ಟ" ಪೊರ್ಲಾಕು ಬದ್ಕ್
ಎಲ್ಲವು ಸುಕಪಡೊಕು ಸಿಕ್ಕುವ ಅರೆ ಹೊತ್ತ್

ಸಂಸಾರ ನೀಸೊಕು ಸಂಕಟ ಮೆಟ್ಟಿ
ತಂದಾನ ತಾನನ ಪದ ಹಾಡಾನೊ ಬನ್ನಿ

# ಸೃಷ್ಟಿ –ಲಯ

ಮೂಡ ಪಡುವಣ ರಾಜ ಪಥಲಿ
ಸೂರ್ಯ ಚಂದ್ರರ್ ನಡ್ದವೆ
ತೆಂಕ ಬಡಗಣ ಜೋಡಿ ದಿಕ್ಕ್‌ಲಿ
ಧ್ರುವಗ ಎರಡ್ ಕಂಡವೆ

ತಂಪು ತಣ್ಣಂಗೆ ಬೆಳ್ಳಿ ತಟ್ಟೆಗೆ
ತಿಂಗಕ್ಕೊಮ್ಮೆ ಕತ್ತಲೆ
ಇರ್‌ಳ್ ಲೋಕದ ರಾಜಂಗುಟ್ಟು
ತಿಂಗಕ್ಕೊಮ್ಮೆ ಹುಣ್ಣಮೆ
ನೀರ್ ಉಕ್ಕಿದೆ ನೀರ್ ಸೊಕ್ಕಿದೆ
ಚಂದ್ರ ಬಂದದೆ ತಬ್ಬಿಕೆ

ಹಗ್ಲ್ ಇರ್‌ಳ್‌ಗೆ ತಿಂಗ ವರ್ಷಕೆ
ಭವ್ಯ ಭಾಸ್ಕರ ಕಾರಣ
ಆವಿ ಆದೆ ಮೋಡ ಕಟ್ಟಿದೆ
ಸಿಡ್ಲ್ ಗುಡುಗು ಸಿಡ್ದದೆ
ಬೀಸಿ ಬಂದದೆ ಚಂಡ ಮಾರುತ
ಭೂಮಿ ನಡ್ಗಿದೆ ಖಂಡಿತ

ತೆಂಕ ಬಡಗಲಿ ಒತ್ತಿ ನಿತ್ತುಟು
ಭಾರಿ ತೂಕದ ಹಿಮಮನೆ
ಕರ್‌ಗಿ ಹೋದರೆ ಆಗಿ ಹೋತು
ಭೂಮಿ ಮುಳುಗಿದೆ ಆ ಕ್ಷಣ

ಸೂರ್ಯ ಇಲ್ಲರೆ ಎಲ್ಲ ಶೂನ್ಯ
ಜೀವ ಕೋಟಿಗ ಸತ್ತವೆ
ಸೃಷ್ಟಿಯೆಲ್ಲಕೂ ಲಯ ಉಟ್ಟು
ಒಪ್ಪಿಕಂಬಕು ಸುಮ್ಮನೆ

# ಮಳೆ ಹಕ್ಕಿ

ಹಾರಾಡಿವೆ    ಹಕ್ಕಿಗ ತೇಲಾಡಿವೆ
ನೆಲ ಮುಟ್ಟಿವೆ    ಹಕ್ಕಿಗ ನೀರ್ಮುಟ್ಟಿವೆ
ನೀರೀಂಪಿವೆ    ಹಕ್ಕಿಗ ಹಾರಾಡಿವೆ
ಬಾಣಕೆ    ಹಕ್ಕಿಗ ಬೊಟ್ಟಾದವೆ
ಕಣ್ಣಿಗೆ    ಹಕ್ಕಿಗ ತಂಪಾದವೆ
ಈಜಾಡಿವೆ    ಹಕ್ಕಿಗ ಮೀದಾಡಿವೆ
ಮಣ್ಣ್‌ದೇ    ಹಕ್ಕಿಗ ಮನೆ ಮಾಡಿವೆ
ಮರಿ ಮಾಡಿವೆ    ಹಕ್ಕಿಗ ಚಿಲಿಗುಟ್ಟಿವೆ

ಹಾರಾಡಿವೆ    ಹಕ್ಕಿಗ ತೇಲಾಡಿವೆ
ಮೇಚಿಗೆ    ಹಕ್ಕಿಗ ಹಾರಾಡಿವೆ
ಬಿಸ್ಲಾಕನ    ಹಕ್ಕಿಗ ಸುಸ್ತಾದವೆ
ಮರೆ ಕುದ್ದ್    ಹಕ್ಕಿಗ ಮೌನಾದವೆ

# ಉಂದುದು ಬೇಡ

ಮನ್ಸನ ಮನ್ಸ್ ಒಂದಾದರುಟ್ಟು
ಕೊಟ್ಟಾಡಿ ಉಂಡಷ್ಟ್ ಸುಕವುಟ್ಟು
ಅವ್ರಲ್ಲಿ ಅಗ್ಯಾನ ಇವ್ರಲ್ಲಿ ಅಗ್ಯಾನ
ಅಗ್ಯಾನ ಎಲ್ಲ ವಿಷದಂಗೆ
ನೆಲ ನೋಡಿ ನಡ್ಯೊಕು, ನೆಲ ನೋಡಿ ಕೊಣಿಯೊಕು
ನೆಲ ನೋಡಿ ಲಾಗಾ ಹಾಕೊಕು
ಮಾಡ್‌ದ ಕೆಲ್ಸನ ಹಾಡಿರೆ ಫಲಯಿಲ್ಲೆ
ಹೊಗಳಿಕೆ ಮಾತ್ ಬೇಕಿಲ್ಲೆ
ಬಗ್ಗಿರೆ ಗುದ್ದೆಚ್ಚ್ ಪಂಡ್‌ಂದೆ ಹೇಳಿವೆ
ಗುದ್ದಿಕೆ ನಿತ್ತವೆ ಸಾಲ್ ಸಾಲ್
ಗುಂಡಿಗೆ ಬಿದ್ದರೆ ಬೀಳಲಿತ್ತೇಳಿ
ಹಾಕಿವೆ ಕಲ್ಲೆರಡ್ ಹೆಚ್ಚಾಗಿ
ನೀರಿಗೆ ಉಂದಿ ನೋಡಿವೆ ಆಳ
ತಾಕತ್ತಿದ್ದರೆ ಬೀಳೊಕು ತಾನಾಗಿ

# ಸೂರ್ಯ ನಿಯಮ

ಇರಳ್ ಹಿಂದೆ ಹಗ್‌ಲ್ ಉಟ್ಟು
ಮುಂದೆ ಮುಂದೆ ಓಡಿವೆ
ಗೆಲುವು ಉಟ್ಟು ಸೋಲೆ ಇಲ್ಲೆ
ಸೂರ್ಯ ಮಾಡ್ದ ನಿಯಮಕೆ
ನಿಮ್ಗ ಗಂಟೆ ದಿನ ವಾರ
ತಿಂಗ ಲೆಕ್ಕ ಕೂಡಿಕೆ
ಕತ್ತಲಾದರುಟ್ಟು ನಿದ್ದೆ
ದುಡ್ದ್ ಸೋತ ಮನ್ಸಂಗೆ

ಕತ್ತಲೆಗೆ ಹೊರ್‌ಟೊ ನೋಡಿ
ನಿಶಾಚರಗ ನಿಲ್ಲದೆ
ಮಳೆ ಸಳಿ ಆದ ಮೇಲೆ
ಬೇಸ ತಿಂಗ ಬಂದದೆ
ನೆರಳ್ ಹಿಂದೆ ಬೆಳ್ಕ್ ಉಟ್ಟು
ಉಂದಿಕಂಡ್ ಓಡಿವೆ
ಹೊಂದಿಕಂಡ್ ಹೋಕು ನಾವು
ಸೂರ್ಯ ಮಾಡ್ದ ನಿಯಮಕೆ

# ಆಹಾ ! ಸುಕ

ನಾಟಿ ನೆಟ್ಟಾತ್ ವಾರ ಮೂರಾತ್
ಜೀವ ಹಿಡ್ದ ನಾಟಿ ಹಸ್ರಾತ್
ಕಾಲಾಡಿ ಕೈಯಾಡಿ ಕಳೆ ಕಿತ್ತ್ ಓಡಾಡಿ
ನಾಟಿ ಬುಡಕ್ಕೆಲ್ಲಾ ಕುಸಿಯಾತ್
ಗದ್ದೆ ಪುಣಿಲಿದ್ದ ಹುಲ್ಲು ಕುಯ್ದಾತ್
ಹಸ್ ಕರ್‌ಗೆ ಹಸಿ ಹುಲ್ಲು ಬೇಕಾತ್
ಗದ್ದೆ ಕೋವುನ ನಿತ್ತೊಮ್ಮೆ ನೋಡಿರೆ
ಹಸ್ರುಟ್ಟ ಅವ್ವನ ಗ್ಯಾನಾತ್
ಇರ್ಲೆಲ್ಲ ಗದ್ದೆಲಿ ಕಾವ್‌ಲ್ ಕುದ್ದದ್
ಅಪ್ಪನ ಕಷ್ಟನೂ ಗ್ಯಾನಾತ್
ಪೈರೆಲ್ಲ ಹೊಡೆ ಕಟ್ಟಿ ಕದ್ರ್ ಕಂಡಾಕನ
ಕೊಣ್ಡಾಡಿ ಓಡಾಡ್ದ್ ಕಂಡಂಗಾತ್
ಬೆಳೆ ಪೂರ ಹಣ್ಣಾಗಿ ಬೀಸಿದ ಗಾಳಿಗೆ
ಗಿಲಿಗಿಲಿ ಕೇಳ್ತಿತ್ತ್ ಗೆಜ್ಜೆ ಹಂಗೆ
ತಲೆ ಮೇಲೆ ಬೆಳೆ ಹೊತ್ತ್ ನಡ್ಕಂಡ್ ಹೋಕನ
ಕೆಮಿ ಮುಟ್ಟಿ ಕೇಳ್ತಿತ್ತ್ ಗಿಲಿಕಿ ಸದ್ದ್!
ಒಕ್ಕಲ್ ಕೆಲ್ಸಾತ್ ಕಡ್ಕೆಗೆ ತುಂಬ್ಯಾತ್
ವರ್ಷಕ್ಕೂ ಹೆಚ್ಚಾತ್ ಬತ್ತ ಕಾಳ್
ಕೊಮ್ಮೆಗೂ ತುಂಬಿದೊ ಚೀಲಲೂ ಕಟ್ಟಿದೊ
ಮಾರಿಕೂ ಮಾರ್‌ದೊ ಗಾಡಿ ಬತ್ತ
ಆರೋಗ್ಯದೊಟ್ಟಿಗೆ ಐಶ್ವರ್ಯ ಇದ್ದರೆ
ಕಾಲಡಿಲೆ ಇದ್ದದೆ ಸ್ವರ್ಗ ಸುಕ!

# ಬೇಸಾಯ

ಹೊಸ ಮಳೆ ಬಂದುಟ್ಟು
ಹದ ಮಳೆ ಸೊರ್ದುಟ್ಟು
ಹೊಲ ಗದ್ದೆಯೆಲ್ಲ ತಂಪಾಗುಟ್ಟು
ರೈತಂಗೆ ಪುರುಸೊತ್ತು ಎಲ್ಯುಟ್ಟು?
    ಗೊಬ್ಬರ ಹರಂಡೊಕು ಹರ ಈ ಊಡೊಕು
    ಅಟ್ಟಂದ ಹತ್ಯಾರ್ ಇಳ್ಸೊಕು
    ಊಡಿಕೆ ಜೋಡೆರಡ್ ಕಟ್ಟೊಕು
ಹಡ್ಲ್ ತೆಗ್ಯೊಕು ಯಾಕಲ್ ಹದ ಆಕು
ಬೀಜದ ಬತ್ತ ಬಿತ್ತೋಕು
    ಅಡ್ಡಕ್ಕೆ ಮೂರ್ಸಾಲ್ ಉದ್ದೊಕೆ ಮೂರ್ಸಾಲ್
    ನೀರಿಗೆ ನಡುಸಾಲ್ ಊಡೊಕು
    ತವೆ ಮರ ಹೊಡ್ದ್ ಸಮ ಆಕು
ಅಗೆಯೆಲ್ಲ ಕೀಳೊಕು ಹಿಡಿ ಹಿಡಿ ಕಟ್ಟೊಕು
ಗದ್ದೆಗೆ ಅಗೆ ಹಿಡಿ ಹಾಕೊಕು
    ಅವು ಬರೊಕು, ಇವು ಬರೊಕು ನೆರೆಕರೆ ಕೂಡೊಕು
    ಮುಯ್ಯಾಳ್ತ್ತೇಳಿ ಜೊತೆಯಾಕು
    ಪೊಲಿಪೊಲಿತ್ತೇಳಿ ಕೈ ಕುತ್ತೊಕು
ಹೊ ಹೋ ಹೊಯ್ಯ್ತ್ತೇಳಿ ನೆಡುವ ಪೊರ್ಲುನ
ವರ್ಷೊಳು ನಾವೆಲ್ಲ ನೋಡೊಕು

# ವಸಂತ ಕಾಲ

ಇರ್ಳ್ ಲೋಕದ । ವಜ್ರ ಹುಳಗ ।
ಜಾತ್ರೆ ನಡ್ಸಿವೆ । ಯಾಗೊಳು
ಉಪ್ಪುಂಟೀಂಟಿಗೆ । ನಿದ್ದೆಯಿಲ್ಲೆ ।
ಚಂದ ಮಾಮಂಗೆ । ಕಾವ್‌ಲ್ ।
ನೀರ್ ಉಕ್ಕಿದೆ । ನೀರ್ ಸೊಕ್ಕಿದೆ ।
ಉಬ್ಬಿ ನಿತ್ತದೆ । ಸಾಗರ ।
        ಹರ್‌ಂಡಿ ಹಬ್ಬಿದೆ । ಮರನ ತಬ್ಬಿದೆ ।
        ಬಳ್ಳಿ ಬಳ್ಳಿಗೆ । ಹೊಸತನ ।
        ಚಿಗ್‌ರ್ ಕೆನ್ನೆಗೆ । ರಂಗ್ ತುಂಬಿದೆ ।
        ವಸಂತನ । ಕಂಡಾಕನ ।
        ಬಾಂಗಿ ಬಗ್ಗಿದೆ । ಹೂವ್ ಜೊಂಪೆ ।
        ಅರುಣನ । ಕೈ ಸೋಂಕಿಗೆ ।
        ಸೂಸಿ ಹರ್‌ಂಡಿದೆ । ಹೂವ್ ಪರಿಮಳ ।
        ಮೆದು ಗಾಳಿನ । ತುಂಟಾಟಕೆ
ಕತ್ತಲಾಕನ । ದುಕ್ಕ ಬಂದದೆ ।
ಹೊತ್ತು ಮೂಡುದು । ಯಾಗೊಳೊ?
ಗ್ಯಾನ ಮಾಡಿವೆ । ಇರ್ಳ್ ಕಳ್ದವೆ ।
ಕೂಡಿ । ಚಿಲಿಪಿಲಿಯಾಟಕೆ ।
        ಉದಯ ಕಾಲದ । ಮಂಜ್ ಹನಿ ಹನಿ ।
        ಮುತ್ತು ಕೋಸಿದ । ಚಪ್ಪರ ।
        ಮೂಗು ಬೊಟ್ಟ್‌ದ್ । ವಜ್ರ ಹೊಳಪು।
        ಕಣ್ಣ್ ಕುಕ್ಕಿದೆ । ಫಳ ಫಳ ।
ಹಕ್ಕಿ ರೆಕ್ಕೆಗೆ । ಶಕ್ತಿ ಬಂದದೆ ।
ಕಾಡ್ ಸುತ್ತುವ । ಆಸೆಗೆ
ಜಿಂಕೆ ಕಾಲ್‌ಗೆ । ಶಕ್ತಿ ಬಂದದೆ।
ಗರಿಕೆ ಮೇಯುವ । ಬಯಕೆಗೆ ।
ಜೇನ್ ದುಂಬಿಗೆ । ಪುರುಸೊತ್ತಿಲ್ಲೆ ।
ತನ್ನ ಗೂಡ್‌ಲಿ । ಕೂರಿಕೆ ।
ಹಾರಿ ಹೋದವೆ । ದೂರದೂರಕೆ ।
ಹೂವ್ ಗಿಡ ಮರ । ಸುತ್ತಿಕೆ ।

# ಮುಗ್ದರ್

ಹೇಳ್ ಚಾಮೆವ್ವ ಹೇಳ್ ನಿಂಗೆ ಬುದ್ಧಿ ಉಟ್ಟಾ ಹೇಳ್ ?
ಆಟಿ ತಿಂಗಲಿ ಸತ್ತೊಳಲ್ಲಾ ಬುದ್ಧಿ ಉಟ್ಟಾ ಹೇಳ್ ?
ಇಟ್ಟ್ ದಿನ ಇದ್ದ ಗಡಾ ಎಂಟ್ ದಿನ ಇರಿಕೆ ಬೊತ್ತಾ ಹೇಳ್ ?
ಆಟಿ ತಿಂಗ ಹೋದ ಮೇಲೆ ಹೋಕೆ ಬೊತ್ತಾ ಹೇಳ್ ?
ಸ್ವರ್ಗದ ಬಾಗ್ಲ್ ಹಾಕೊಳತ ಗೊತ್ಲೆಯ ನಿಂಗೆ ಹೇಳ್ ?
ಆಟಿ ತಿಂಗಲಿ ಸತ್ತವೆಲ್ಲ ನರಕಕ್ಕೆ ಹೋದವೆಗಡ ಹೇಳ್ ?

ಕೂಸ್ನ ಮೀಸಿ ಕತೆ ಹೇಳವ್ ಯಾರ್ ಚಾಮೆವ್ವ ಹೇಳ್ ?
ಮಜ್ಜಿಗೆ ಕಡ್ದ್ ಬೆಣ್ಣೆ ಕೊಡವ್ ಯಾರ್ ಚಾಮೆವ್ವ ಹೇಳ್ ?
ತಲೆ ಬಾಚಿ ಜಡೆ ಹಾಕವ್ ಯಾರ್ ಚಾಮೆವ್ವ ಹೇಳ್ ?
ಬೀಟಿ ತುಂಡಂಗೆ ಇದ್ದವುಳ್‌ನೀ ಅಧೆಂಗೆ ಸತ್ತ ಹೇಳ್ ?
ಗೋದೆ ಕಂಬ ಇದ್ದಂಗಿದ್ದ ಅಧೆಂಗೆ ಸತ್ತ ಹೇಳ್ ?
ಆಟಿ ತಿಂಗಲಿ ಸತ್ತೊಳಲ್ಲ ಬುದ್ಧಿ ಉಟ್ಟಾ ಹೇಳ್ ?

ಜಿರಿಗುಟ್ಟೊ ಮಳೆಲಿನೀ ಸತ್ತೊಳಲ್ಲ ಬುದ್ಧಿ ಉಟ್ಟಾ ಹೇಳ್ ?
ಸೌದೆ ಪೂರ ಚಂಡಿ ಆವುಟು ಬೆಂಕಿ ಹೊತ್ತುದಾ ಹೇಳ್ ?
ಗುಂಡಿ ಪೂರಾ ನೀರ್ ತುಂಬಿಟ್ಟು ಹೂಣ್‌ಧೆಂಗೆ ಹೇಳ್ ?
ಬರವು ಬಾದು, ಹೋಗವ್ ಹೋದು ಹೆಂಗೆ ಚಾಮೆವ್ವ ಹೇಳ್ ?

ಇಟ್ಟ್ ದಿನ ಇದ್ದ ನೀ ನರಕಕ್ಕೆ ಹೋಬೇಡ ಚಾಮೆವ್ವ ?
ಎಂಟ್ ದಿನ ಇದ್ದ್ ನೀ ಸ್ವರ್ಗಕ್ಕೆ ಹೋಕು ಚಾಮೆವ್ವ ?
ಹೇಳ್ ಚಾಮೆವ್ವ ಹೇಳ್ ನಿಂಗೆ ಬುದ್ಧಿ ಉಟ್ಟಾ ಹೇಳ್?
ಆಟಿ ತಿಂಗಲಿ ಸತ್ತೊಳಲ್ಲ ಬುದ್ಧಿ ಉಟ್ಟಾ ಹೇಳ್?

# ಕೂಡಿ ಆಡಿ ಬದ್ಕನೊ

ಲೋಕದೊಳಗೆ ಇರುವ ನಮ್ಮ ಮನ್ಸರ್ತ್ತೇಳಿ ಕರ್ದವೆ
ಒಂದೆ ಗಾಳಿ ಒಂದೆ ನೀರ್ ಸೂರ್ ಮಾತ್ರ ಬೇರೆ
ಒಂದೆ ದಾರಿ, ಒಂದೆ ಸಂತೆ ಎಲ್ಲ ಕೂಡಿ ಆಡಿವೆ
ಒಂದೆ ಸೂರ್ಯ, ಒಂದೆ ಚಂದ್ರ ನಾವ್ ಮಾತ್ರ ಬೇರೆ!

ಕಾಳ್ ಬೇಕ್, ಬೇಳೆ ಬೇಕ್ ಒಂದೆ ಕಡೆ ಇಲ್ಲೆ
ನಂಗೆ ನೀನ್, ನಿಂಗೆ ನಾನ್ ಮರಿತಾ ಒಳೊ ಯಾಕೆ?
ಎಣ್ಣೆ ಬೇಕ್, ಬೆಣ್ಣೆ ಬೇಕ್ ಒಂದೆ ಕಡೆ ಇಲ್ಲೆ
ಜಾತಿ ಪಂಥ ಮಾಡಿಬುಟ್ಟೊ ಒಳಗೊಳಗೆ ಸದ್ದ್!

ರಟ್ಟೆ ಗಟ್ಟಿ ಉಟ್ಟುತ್ತೇಳಿ ಹೆಟ್ಟಿ ಕುಟ್ಟಿ ನೋಡಿವೆ
ಇಟ್ಟಿ ಮೀನ್ ಚಟ್ಟ್ತ್ತೇಳಿ ಹಾರಿ ಬೀಳ್ದು ಚೆಟ್ಟಿಗೆ
ಹಾರಿ ಹಾರಿ ಕೊಣ್ದ್ಕೊಣ್ದ್ ಮಣ್ಣ್ ತಿಂದ್ ಹೋದವೆ
ಜಾತಿ ಧರ್ಮತ್ತೇಳಿಕಂಡ್ ಗುದ್ದಾಡಿ ಸತ್ತವೆ

ಒಂದೆ ಹುಟ್ಟು ಒಂದೆ ಸಾವು ಮೌಲ್ಯ ಮಾತ್ರ ಗೊತ್ತೆ
ಕೂಡಿ ಆಡಿ ಬದ್ಕಿ ನಾವ್ ಒಂದ್ ಗೂಡು ಸೇರನೊ
ಒಂದೇ ಪಾಲ ದಾಟಿ ನಾವ್ ಕೂಡಿ ಆಡಿ ಬದ್ಕನೊ

# ಸಮಾನತೆ ಬಾದು ಯಾಗ?

ಕಲ್ಪನೆಯ ಕುಂಚ ಕೊಣ್ದಂಗೆ ರೂಪ
ಶಿಲ್ಪಿ ಕಡ್ದಂಗೆ ಶಿಲ್ಪ
ಕಲೆಗಾರನ ದೃಷ್ಟಿ– ಕೋಟಿ ದೇವರ ಸೃಷ್ಟಿ!!
ನಾಲ್ಕೊ ಆರೋ ತಲೆ, ಎಂಟೋ ಹತ್ತೋ ಕೈ
ಆಕಾರವೊ ವಿಕಾರವೊ
ಗುಡಿಕಟ್ಟಿ ನಡೂಲಿ ಇಸಿ ಮಹಾ ಪೂಜೆ ಅದ್ಕೆ
ಕ್ಷಮಿಸಿ, ಎಲ್ಲವ್ಕೂ ಅವಕಾಶ ಇಲ್ಲೆ!
ಜಾತಿ ಧರ್ಮದ ಗೋಡೆ
ಲಿಂಗ ಭೇದದ ಪರದೆ
ಶ್ ! ನೀ ಮುಟ್ಟಿಕಾಗದ್ ಜೋಕೆ!
ಹೇಳ್ತ್‌ಲೆ ಕಲ್ಲ್ ಮೂರ್ತಿ
ವಿಜ್ಞಾನ ಲೋಕದ 'ಮೂಢ'ರ ಲೋಕ ಇದ್!
ಇಂದಲ್ಲ, ನಾಳೆ ನೀ ಸೂರ್ಯ ಚಂದ್ರರ ನೋಡಿಕಾಗ್‌ದ್‌ತ ಹೇಳ್‌ವೊ
ನಿಯಮ ಮಾಡಂವ ಯಾಂವನೊ?
ಭೂಕಂಪಕೋ ಜ್ವಾಲಾಮುಖಿಗೋ
ಕಡೆಗೆ ಸುನಾಮಿಗೋ................
ಶಾಸ್ತ್ರನೂ ಬೇಡ, ಮಂತ್ರನೂ ಬೇಡ
ಮೂರ್ತಿನೂ ಇಲ್ಲೆ, ಕೀರ್ತಿನೂ ಇಲ್ಲೆ
ಶಾಸ್ತ್ರ ತೇಲ್ದೆಯೋ ಮುಳುಗಿದೆಯೋ ಗೊತ್ತ್ಲೆ
ಯಾಕೆತ್ತೇಳಿರೆ ನೋಡಿಕೆ ಯಾರೂ ಇರಿಕಿಲೆ!

# ಅದ್ಭುತ ಎಲ್ಲ ಹಿಂಗೆ

ಕಾಳ್ ಕಣ್ಣ್ ಬುಡುವ ಸದ್ದ್
ಬೇರ್ ಭೂಮಿಗಿಳಿವ ಸದ್ದ್ ಕೇಳ್ದುಲೆ
ರಸ ಹೀರಿ ಮರ ಬೆಳೆವ ಸದ್ದ್
ಹೂವ್ ಬುಟ್ಟ್ ಮಿಡಿ ಆಗಿ ಹಣ್ಣಾಗುವ ಸದ್ದ್
ಎಳೆ ನೀರ್ ಕಾಯೊಳಗೆ ತುಂಬುವ ಸದ್ದ್- ಕೇಳ್ದುಲೆ
        ಭೂಮಿ ಉರುಂಡುವ ಸದ್ದ್
        ಸೂರ್ಯ ಚಂದ್ರರ ನಡಿಗೆ ಸದ್ದ್- ಕೇಳ್ದುಲೆ
ಇರ್ಲ್ ಹಗ್ಲಾಗುವ ಸದ್ದ್
ನೀರ್ಲಿ ಉಪ್ಪು ಸೇರ್ವ ಸದ್ದ್
ಮಣ್ಣ್‌ಲಿ ಖನಿಜ ಅಡಂಗುವ ಸದ್ದ್ - ಕೇಳ್ದುಲೆ
        ನೀರ್ ಆವಿ ಆಗುವ ಸದ್ದ್
        ಬಾಣಲಿ ಮಳೆ ಬಿಲ್ಲ್ ಮೂಡ್ವ ಸದ್ದ್- ಕೇಳ್ದುಲೆ
ಮನ್ಸ್‌ಗೆ ಮನ್ಸ್ ಕೂಡ್ವ ಸದ್ದ್
ರೆಪ್ಪೆಗೆ ರೆಪ್ಪೆ ಬಡಿವ ಸದ್ದ್ - ಕೇಳ್ದುಲೆ
        ಕಣ್ಣೀರ್ ಇಳ್ದ್ ಕೆನ್ನೆ ಮೇಲೆ ಹರಿವ- ಸದ್ದ್
        ಕಾಲನ ಕರೆಗೆ ಓಗುಟ್ಟಿ ಉಸ್ರ್ ನಿಲ್ಲುವ ಸದ್ದ್- ಕೇಳ್ದುಲೆ
ಅದ್ಭುತ ಎಲ್ಲ ಹಿಂಗೆ ಸದ್ದಿಲ್ಲದೆ ಎಲ್ಲ ಒಳಗೇ !

# ನೀನೆಲ್ಯೊಳಾ ?

ಹೆತ್ತ ಹೊತ್ತ ಮುತ್ತು ಕೊಟ್ಟ ತುತ್ತುಕೊಟ್ಟ
ತಾನಿ ತಾನಿತ ಕೈ ಹಿಡ್ದ್ ನೀ ನಡ್ಸಿದ
ನಾ ಬೀಳ್ಕನ ಅಯ್ಯೋ ಬಿದ್ದ್‌ಬುಟ್ಟಾತ ಹೇಳ್ತಿದ್ದ
ಅವ್ವಾತ ನಾ ಕರೆಕನ 'ಓ ಬಂದೇ' ತ ಹೇಳ್ತಿದ್ದ.
ಕಾಯ್ಲು ಬಾಕನ ಮದ್ದ್ ಅರೆತ್ತಿದ್ದ ಕುಡೆಕೆ ಕೊಡ್ತಿದ್ದ
ಬಳಪ ಕೊಟ್ಟ ಸ್ಲೇಟ್ ಕೊಟ್ಟ
ಓದಿಕೆ ಗೊತ್ತಿಲ್ಲದ ನೀ ನನ್ನ ಓದ್ಸಿದ -ಅವ್ವಾ ನೀನೆಲ್ಯೊಳ?

ಕಾಡಿಗೆ ಹೋದರೆ ನೀ ಬರಿ ಕೈಲಿ ಬಾತಿತ್ಲೆ
ನಾರೆ ಗೆಣ್ಸೊ, ಅಕ್ಕಿ ಗೆಣ್ಸೊ ತೀನ ಗೆಣ್ಸೊ ತಾತಿದ್ದ
ಬೇಸಿನೋ ಸುಟ್ಟೋ ತಿಂಬಕೆ ಕೊಡ್ತಿದ್ದ
ಮುದ್ದು ಮಾಡಿ ನನ್ನ ಬೆಳ್ಸಿದ -ಅವ್ವಾ ನೀನೆಲ್ಯೊಳ?

ಅವ್ವಾ ಹೊಟ್ಟೆ ಹಸ್ತದೆತ ನಾ ಮರ್ಡಕನ
ಬೆದ್ರಕ್ಕಿ ಗಂಜಿ ಬೇಸ್ತಿದ್ದ
ಕೊತ ಕೊತಾತ ಕೊದಿಯಕನೇ ಇಕ್ಕವ್ವಾತ ಹೇಳ್ತಿದ್ದೆ
"ಕಾಯಿ ಕಾಯಿ ನೀರ್ ಕಾಸಿಕೆ ಮುಟ್ಟ"
"ಬೇಯಿ ಬೇಯಿ ಅನ್ನ ಬೇಯಕೆ ಮುಟ್ಟ"ತ ಪದಾ ಹೇಳ್ತಿದ್ದ
ನನ್ನ ಅಳ್‌ಗೆಲ್‌ನ ಮರ್‌ಸ್ತಿದ್ದ
ಉಂಬಕೆ ಕೊಟ್ಟ್ ಕುಸಿ ಪಡ್‌ಸ್ತಿದ್ದ -ಅವ್ವಾ ನೀನೆಲ್ಯೊಳ?

ಕಷ್ಟಾತ್ತೇಳಿ ಕಣ್ಣೀರ್ ಹಾಕದೆ ದುಕ್ಕನ ನುಂಗ್ಯೊಳ
ಬದ್ಕ್‌ನ ರೀತಿನ ಕಲ್ಸಿಕೊಟ್ಟೊಳ
ಕಂಡವರ ಕಂಬುಳಿ ನಾವಿಗೆ ಬ್ಯಾಡಾತ
ಕೆಮಿ ಮಾತ್ ಹೇಳಿಕೊಟ್ಟೊಳ -ಅವ್ವಾ ನೀನೆಲ್ಯೊಳ?

# ಸೊನ್ನೆ !

ಸುರೂಲಿ ಕೂಸು ಸುತ್ತಿತ್ ಸೊನ್ನೆ
ಸೊನ್ನೆಲೆ ಅಡಂಗಿಟ್ಟು ಬದ್ಕ್‌ನ ಗುಟ್ಟು
ಉರುಂಡುವ ಚಕ್ರ, ನೀರ್‌ದ್ ಗುಳ್ಳೆ
ಟಿಕ್ಕ್ ಟಿಕ್ಕ್ ಗಂಟೆ, ಇಕ್ಕುವ ಮೊಟ್ಟೆ – ಸೊನ್ನೆದೆ ರೂಪ!
ಸುರೂಲಿ ಕೂಸು ಸುತ್ತಿತ್ ಸೊನ್ನೆ
ಸೊನ್ನೆಲೆ ಅಡಂಗಿಟ್ಟು ಬದ್ಕ್‌ನ ಗುಟ್ಟು
ಆಟದ ಚೆಂಡ್, ಉರುಂಡುವ ಗೋಲಿ
ಸುತ್ತುವ ಬುಗುರಿ, ನೋಡುವ ಕಣ್ಣ್
ಆಡುವ ಬಾಯಿ –ಸೊನ್ನೆದೆ ರೂಪ !
ಹಕ್ಕಿದ್ ಗೂಡು ಮರಲಿ ಪೋಟೆ,
ಎಲಿದೆ ಮಾಳಿ

–ಸೊನ್ನೆದೆ ರೂಪ !

ನಾವೂ ನೀವೂ ಬದ್ಕುದು ಇಲ್ಲೆ
ಒಬ್ಬೊಂಗೊಬ್ಬ ಅರ್ಥನೆ ಆಗದೆ
ಸಾಗ್‌ತ ಉಟ್ಟು ಬದ್ಕ್‌ನ ಗಾಡಿ
ಹೊಟ್ಟೆ ತುಂಬ ಕಿಚ್ಚ್‌ನ ತುಂಬಿ
ಮನ್ಸ್ ತುಂಬ ಕೊಚ್ಚೆನ ತುಂಬಿ
ನಾವೂ ನೀವೂ ಬದ್ಕುದು ಇಲ್ಲೆ
ಸೊನ್ನೆತ್ತೇಳುವ ಗೋಲದ ಒಳಗೆ
ಭೂಮಿತ್ತೇಳುವ ಮಣ್ಣ್‌ನ ಮೇಲೆ

ಸುರೂಲಿ ಕೂಸು ಸುತ್ತಿತ್ ಸೊನ್ನೆ
ಸೊನ್ನೆಲೆ ಅಡಂಗಿಟ್ಟು ಬದ್ಕ್‌ನ ಗುಟ್ಟು

# ಭ್ರಮೆ

ಗಾಳೀಲಿ ಹಕ್ಕಿ, ನೀರ್‌ಲಿ ಮೀನ್
ಭೂಮೀಲಿ ನಾವ್ ನೀವ್
ನಮಿಗಾಗಿ ಎಲ್ಲಾ, ಇನ್ನಾರಿಗೂ ಅಲ್ಲ
ಭ್ರಮೆಯೊಳಗೆ ನಾವು ಎಲ್ಲಾ
ಎಲ್ಲಿ ನೋಡಿರೂ ಅಲ್ಲಿ ಅನುಮಾನದ ಹುತ್ತ
ಭುಗಿಲೆದ್ದ 'ಹೊಗೆ'ಯ ಆಟ
ಗಡಿಗಡಿಗೆ ಗಡಿತಂಟೆ
ಜಲ_ಜಗಳ ಬಳುವಳಿ !
ಗಡಿ–ಜಲ ಇರೋಮುಟ್ಟ ಜಟಾಪಟಿ
ದೊಡ್ಡಾಟ ನಿತ್ಯ ಕಟ್ಟಿ ಇಸಿದ ಬುತ್ತಿ
ಹೊಗೆಯಾಟ ನಿತ್ತ್ ನಗೆ ರಟ್ಟಿ ಬರೊಕು
ಪೊರ್ಲಾಕು ನಾಕ್ ದಿನದ ಬದ್ಕ್
ಅಪ್ಪ ನೆಟ್ಟತ್ ಬತ್ತ
ಮಂಜ ನೆಟ್ಟುಟು ಭಂಗಿ
ಬದಲಾತ್ ಬದ್ಕ್ ಪೂರ
ಝಣ ಝಣ ಹಣದ ಮುಂದೆ
ಗುಣ ಎಲ್ಲಿ ಅಡಂಗ್ಯುಟ್ಟು ?
ಗುಣ ಅಡಂಗ್ಯುಟ್ಟು ' ಹಣದ ಗೋರಿ' ಯೊಳಗೆ
ಸಮಯ ಇದ್ದರೆ ಬನ್ನಿ ಹುಡ್ಕನೊ ಗುಣನ
ಹಣದ ಗೋರಿಯೊಳಗೆ

# ಪುಣ್ಯ ಭೂಮಿ

ಕೊಡ್‌ಗ್ ಭೂಮಿ ಇದ್ ಪುಣ್ಯ ಭೂಮಿ ಇದ್
ಹಸ್ರ್ ಸೆರ್‌ಗ್‌ನ ತಪವನ
ಶಾಂತಿ ನಾಡಿದ್ ಕಾಂತಿ ನಾಡಿದ್
ನೆಮ್ಮದಿನ ತವರ್ಮನೆ

ಕಣಿವೆ ಕಂದರ ನೋಟ ಸುಂದರ
ಖಗಮಿಗಗಳ ಕಲರವ
ಎತ್ತೆರೆತ್ತರದ ಬೆಟ್ಟ ಬೆಟ್ಟದ ಸೆರೆಲಿ
ಶಶಿಭಾನು ಇಣಿಕಿವೆ ನಾಚಿ ನಾಚಿ

ಮುಟ್ಟಿ ಹೋದೆ ಇಲ್ಲಿ, ತಟ್ಟಿ ಹೋದೆ ಇಲ್ಲಿ
ಮುಂಗಾರ್ ಮೋಡ ರಾಶಿ
ಸುರ್‌ಸುರ್ದ್ ಬಾತ್ ಹೆಜ್ಜೇನ್ ಸೋನೆ
ನೆಲ ಪೂರ ತಂಪು ತಂಪು
ಧುಮು ಧುಮುಕಿ ಹರ್ದ‍ದೆ, ತುಳುತುಳುಕಿ ಹರ್ದ‍ದೆ
ಕವೇರ ಕುವರಿ ಇಲ್ಲಿ
ಒಂದಾಗಿ ಕೂಡಿ ಪೊರ್ಲಾಗಿ ಹರ್ದ್
ಗಡಿಯಾಚೆ ಖ್ಯಾತಿ ನಿಂದ್
ಒಳಗುಟ್ಟು ಉಟ್ಟು ಐಕ್ಯತೆಯ ಗಾನ
ಚಿರ ಸ್ಥಾನ ಉಟ್ಟು ನಿಂಗೆ

# ಆಸೆ ಜಾಸ್ತಿ –ಭಾಷೆ ಇಲ್ಲೆ !

ಇಲ್ಲಿ ಆವಿ ಅಲ್ಲಿ ಮೋಡ
ಇನ್ನೆಲ್ಲೊ ಮಳೆದ್ ಅಬ್ಬರ
ಇಲ್ಲಿ ಹೂವು, ಅಲ್ಲಿ ದುಂಬಿ
ಇನ್ನೆಲ್ಲೊ ಜೇನ್‌ದ ಝೇಂಕಾರ
ಹಗ್ಲ್ ಬೇಕ್, ಇರ್ಲ್ ಬೇಕ್ ಜೀವ ಜಾಲದ ಬದ್ಕಿಗೆ
ಬೇವು ಬೇಕ್, ಬೆಲ್ಲ ಬೇಕ್ ಬದ್ಕ್‌ನ ರಸ ಕವಳಕೆ
ನಿಂಗೆ ನಾನ್, ನಂಗೆ ನೀನ್ ತತ್ತ್ವ ಮರ್ತೆ ಹೋಗುಟು
ನಾವು ತಿಂಬ ಉಪ್ಪು ಅನ್ನ ಒಬ್ಬ ಮಾಡ್ದ್ ಅಲ್ಲ

ಬೀಸಿ ಬರ್‌ವ ಗಾಳಿಗಿಲ್ಲೆ ಮಡಿ ಮೈಲಿಗೆ ಸೋಂಕು
ಸೂರ್ಯಂಗಿಲ್ಲೆ ಚಂದ್ರಂಗಿಲ್ಲೆ ನಮ್ಮಲ್ಲಿರ್ವ ಸೊಕ್ಕು
ಪೆದ್ದು ಜನರ ಗುದ್ದಾಟ ನಿನ್ನೆ ಮೊನ್ನೆಂದಲ್ಲ
ಗೋರಿ ಗೋರಿ ಗುಡ್ಡೆ ಹಾಕಿ ಗುಡ್ಡೆ ಮೇಲೆ ನಿತ್ತವೆ
ಆಸೆ ಜಾಸ್ತಿ– ಭಾಷೆಯಿಲ್ಲೆ ಎಲ್ಲಾ ನಂದೇತ್ತೇಳಿವೆ
ಇಲ್ಲಿ ಹುಟ್ಟಿ, ಅಲ್ಲಿ ಬೆಳ್ದ್ ಎಲ್ಲೋ ಸತ್ತ್‌ಹೋದವೆ
ನಂಗೂ ಇಲ್ಲೇ, ನಿಂಗೂ ಇಲ್ಲೇ ಉಸ್ರ್ ನಿತ್ತ ಮೇಲೆ

# ಕಾಲ ಜ್ಞಾನಿ !

ಹಾರಿ... ಹಾರಿ... ಹಾರಿ... ದೂ ೂ ೂ ೂ....ರ ಹಾರಿ
ನೂರಾರ್ ಮೈಲ್ ದೂ...ರ ಹಾರಿ
ಅಂಗಳಲಿ ಕುದ್ದ ಹಕ್ಕಿಗೆ ಗೊತ್ತುಟ್ಟು
ಸಳಿ ಗಾಳಿ ಮಳೆ ಮಂಜಿ ಹವಾಮಾನದ ಗುಟ್ಟು
ದಿಕ್ಕ್ ತಪ್ಪದೆ ಹಾರುವ ಹಕ್ಕಿಗೆ
ಇಷ್ಟೇ ಇಷ್ಟ್ ಮೆದುಳು !
        ಕಣ್ಣಿಗೆ ದೃಷ್ಟಿ, ರೆಕ್ಕೆಗೆ ಶಕ್ತಿ
        ಹಕ್ಕೀ ನೀ ಅದ್ಭುತ – ಆಕಾಶಕ್ಕೆ ದೃಷ್ಟಿ ಬೊಟ್ಟು!
        ಮೇಲೆ ಅಟ್ಟನೂ ಇಲ್ಲೆ, ಸುತ್ತ ಗೋಡೆನೂ ಇಲ್ಲೆ
        ಕೆಳಗೆ ಆಳ ಪಾತಾಳ ಸಾಗರ ತಳ
        ನಿನ್ನ ಕಣ್ಣಿಗೆ ಬರೀ ನೀರ್ ಹನಿ
        ಬೆಟ್ಟ ಬಯ್ಲ್ ಎಲ್ಲಾ
        ನಿನ್ನ ರೆಕ್ಕೆ ಅಡಿಗೆ ಮರಿಗ !
        ಜನ ದನ ನಿನ್ನ ಕಣ್ಣಿಗೆ ಪಿಜಿನ್‌ಗ!
ಭೂಕಂಪ ಜ್ವಾಲಾಮುಖಿ ಮಹಾಮಾರಿ
ಗುಡುಗು, ಸಿಡ್ಲ್ ಬಿರ್‌ಗಾಳಿ ಮಳೆ
ಹಕ್ಕೀ ನಿನ್ನ ಮೆದುಳಿಗೆ ಗೊತ್ತುಟ್ಟು– ನೀ ಕಾಲ ಜ್ಞಾನಿ!!
        ಪಿಸಿ ಪಿಸಿ ಗುಸುಗುಸು ಮನ್ಸನ ಹಣೆ ಬರ
        ಒಬ್ಬೊಬ್ಬ ಒಂದೊಂದ್ ಜ್ವಾಲಾಮುಖಿಗ
        ಮೊಕವಾಡ ಹಾಕಂಡ ವಿಷ ಸರ್ಪಗ
ಹಕ್ಕೀ ನೀ ಅದ್ಭುತ – ಆಕಾಶಕ್ಕೆ ದೃಷ್ಟಿ ಬೊಟ್ಟು
ನಮ್ಮನ ನೀ ಬೊಯಿ ಬೇಡ ದಯವಿಟ್ಟು
ನಾವ್ ಹಿಂಗೆ ಯಾಗೋಳು...............

# ಜೀವ ಕೊಟ್ಟ ನೀವ್ ನಮಿಗೆ

ಅಪ್ಪ ಅವ್ವ ಬದ್ಕಲೊಮ್ಮೆ ನಡ್ದಾಡುವ ಮಂದಿರ
ನಿಮ್ಮ ನೆರ್‌ಳ್ ನಮಿಗೆ ತಂಪು ಬದ್ಕಾಕು ಸುಂದರ

ವಿದ್ಯೆ ಬೇಕ್ ಬುದ್ಧಿಬೇಕ್ ತಲೆ ಬಾಗಿ ಬೇಡಿವೆ
ರಟ್ಟೆ ಶಕ್ತಿ ಕೊಟ್ಟ ನಿಮಿಗೆ ಕೈ ಮುಗ್ದ್ ನಿತ್ತವೆ

ಅಪ್ಪ ಅವ್ವ ನಾವ್ ನಿಮಿಗೆ ಊರುಗೋಲು ಆಗೊಳೊ
ನಿನ್ನೆ ಇಂದ್ ನಾಳೆ ಮುಂದ್ ಸುಕ ಸಿಕ್ಕಲಿ ಯಾಗೊಳು

ಜೀವ ಕೊಟ್ಟ ನೀವು ನಮಿಗೆ ಶಿವನ ರೂಪ ಬಾಳಿಗೆ
ಸೂರ್ಯಚಂದ್ರ ನೀವೆ ನಮಿಗೆ ನಮ್ಮೆಲ್ಲರ ಬದ್ಕಿಗೆ

ನಿನ್ನೆ ನೀವ್ ಇಂದ್ ನಾವ್ ನಾಳೆ ಯಾರೊ ಗೊತ್ತ್‌ಲೆ
ನಿನ್ನೆ ಕಷ್ಟ ಇಂದ್ ಸುಕ ನಾಳೆ ಯಾರೂ ಹೇಳ್ತ್‌ಲೆ

ಕಟ್ಟಿಕೊಟ್ಟ ಬುತ್ತಿ ಉಟ್ಟು ಒಂದ್ ಹೊತ್ತ್‌ನೂಟಕೆ
ಹೇಳಿ ಕೊಟ್ಟ ಮಾತ್ ಉಟ್ಟು ನಮ್ಮ ಬದ್ಕನುದ್ದಕೆ

ತಪ್ಪು ಒಪ್ಪು ಉಟ್ಟೆ ಉಟ್ಟು ಮನ್ನರಾದ ನಮ್ಮಲಿ
ತಪ್ಪುನೆಲ್ಲ ಒಪ್ಪು ಮಾಡಿ ಕಾಪಾಡಿ ಬದ್ಕಲಿ

# ಲೋಕಕ್ಕೊಂದೇ ಭಾರತ

ಲೋಕಕ್ಕೊಂದೇ ಭಾರತ, ಶಾಂತಿ ಪ್ರೀತಿನ ಭಾರತ
ಸೋದರತೆನ ಭಾರತ, ಐಕ್ಯಮಂತ್ರದ ಭಾರತ
ಎಷ್ಟೊ ಜಾತಿಯ ಎಷ್ಟೊ ಭಾಷೆಯ ಶಾಂತಿ ದೂತನ ಭಾರತ
ಗಂಗೆ ಯಮುನೆನ ತುಂಗ ಭದ್ರೆನ ಬ್ರಹ್ಮ ಪುತ್ರನ ಭಾರತ

ಬತ್ತ ರಾಗಿ ಬೆಳ್ದವಿಲ್ಲಿ, ಜೋಳ ಬೇಳೆ ಉಟ್ಟು ಇಲ್ಲಿ
ಹಾಡಿ ಉಂಬೊನೊ ನಾವ್ ಕೂಡಿ ಉಂಬೊನೊ
ನಾವು ನಮ್ಮದ್‌ತ್ತೇಳಿಕಂಡ್ ಕೈಗೆ ಕೈ ಕೂಡಿಕಂಡ್
ಕೆಟ್ಟ ಶಕ್ತಿ ಮುಟ್ಟದಂಗೆ ಧೈರ್ಯತಾಳಿ ಬಾಳನೊ

ಮೂರ್‌ದಿಕ್ಕಲಿ ಮೂರ್ ಸಾಗರ ಭಾರತಾಂಬೆ ಥಳ ಥಳ
ಬೆಟ್ಟಗುಡ್ಡ ಬಯಲ್‌ಕಂದರ ದೇಶ ನಿಜಕೂ ಸುಂದರ
ಭಾರತಾಂಬೆನ ಮಕ್ಕ ನಾವ್ ಧ್ವಜದ ಕೀರ್ತಿನ ಉಳ್ಸೊನೊ
ನೂರ್ ವರ್ಷ ಬಾಳಿ ನಾವ್ ದೇಶಕಾಗಿ ದುಡಿಯನೊ

# ಎದ್ದೇಳ್ ಕಂದ ನೀನ್

ಉದಯರಾಗ ಕೇಳ್ ಕಂದ ನಿದ್ದೆ ಬುಟ್ಟ್
ಎದ್ದೇಳ್ ಕಂದ ನೀನ್ ಹಾಸಿಗೆ ಬುಟ್ಟ್
ಭೀಮರಾಜ ಹಾಡುತುಟ್ಟು ಉದಯರಾಗ
ಕಂದ ನೀನ್ ಹಾಡ್ ಹೇಳ್ ನಿನ್ನದೇ ರಾಗ
ಹಕ್ಕಿಗೆಲ್ಲ ಹಾರಿ ಹೋದೊ ಗೂಡ್ ಬುಟ್ಟ್
ಕಂದ ನೀನ್ ಹೊರಗೆ ನೋಡ್ ಕಣ್ಣ್ ಬುಟ್ಟ್
ಮಂಜಿ ಹನಿ ಸೊರಿತಾ ಉಟ್ಟು ಸುತ್ತ ಮುತ್ತ
ಮುತ್ತುನಂಗೆ ಉದುರುತುಟ್ಟು ಅತ್ತ ಇತ್ತ
ಓದು ಬರಿ ಕಂದ ನೀನ್ ನಮ್ಮನೆ ದೀಪ
ಬದ್ಕಿ ಬಾಳಿ ಆಕು ನೀನ್ ನಂದಾ ದೀಪ
ನೆರಳ್‌ನಂಗೆ ಒಳೊ ನಿಂಗೆ ಹಿರಿಯವು ಎಲ್ಲ
ಬೆಳ್ದ್ ನಿತ್ತ್ ದೀಪ ಆಕು ನಾಡಿಗೆ ಎಲ್ಲ
ದಿವ್ಯ ನೀನ್ ದೀಪ ನೀನ್ ನಮ್ಮನೆ ಕಂದ
ನಮ್ಮ ಹರ್ಕೆ ಉಟ್ಟು ನಿಂಗೆ ಮರಿಬೇಡ ಕಂದ
ತಗ್ಗಿ ಬಗ್ಗಿ ನಡೆದು ಕಲಿ ಕಂದಾ ನೀನ್
ನಿನ್ನ ದಾರಿ ನಿಂಗೆ ಉಟ್ಟು ಮರಿಬೇಡ ನೀನ್
ನಗೆ ಮೊಕ ಬತ್ತದಿರ್‌ಲಿ ಮೊಕಲಿ ಎಂದೂ
ಅತಿ ಆಸೆ ಬೇಡ ನಿಂಗೆ ಬದ್ಕ್‌ಲಿ ಎಂದೂ

# ಶ್ರೀ ರಾಮಚಂದ್ರಂಗೆ

ಲೋಕಕೊಬ್ಬ ರಾಮ ನೀನ್ ಕೌಸಲ್ಯ ಕಂದ
ಪುಣ್ಯ ಪುರುಷ ರಾಮ ನೀನ್ ದಶರಥ ನಂದ
ಚಾಡಿ ಮಾತ್ ಕೇಳಿಕಾಗದ್ ಬದ್ಕ್‌ಲಿ ಎಂದೂ
ಅವ್ವಂದ ದೂರ ಮಾಡ್ತ್ ಮಂಥರೆ ಅಂದ್
ಕಾಡ್ ನಾಡ್ ಎಲ್ಲ ಒಂದೇ ನಿನ್ನ ಬಾಳ್‌ಲಿ
ನಾರ್ ಬೇರ್ ಎಲ್ಲಾ ಒಂದೇ ನಿನ್ನ ಬದ್ಕ್‌ಲಿ
ಶಿವನ ಬಿಲ್ಲ್ ಹೂವ್‌ನಂಗೆ ರಾಮಚಂದ್ರಂಗೆ
ಸೀತೆಯೊಂದೆ ದಿವ್ಯ ಮಂತ್ರ ರಾಮನಾತ್ಮಕೆ
ರಾಮಪಾದ ಸೋಂಕಿ ಅಹಲ್ಯೆಗಾತ್ ಜೀವನ
ಕಾದ್ ಕುದ್ದ ಶಬರಿಗಾತ್ ಆತ್ಮ ಪಾವನ
ಸೂರ್ಯ ಕುಲದ ರಾಮಂಗಿತ್ತ್ ದಾರಿಲಿ ಕಷ್ಟ
ಸಿನೇತರೊಟ್ಟಿಗೆ ನೀಸಿ ಬಾತ್ ಸರ್ವಸಂಕಟ
ರಾಮಂಗಿತ್ತ್ ನೆರಳ್‌ನಂಗೆ ಲಕ್ಷ್ಮಣ ಅಂದ್
ಆತ್ಮ ಬಲಕೆ ಸಾಕ್ಷಿ ಆತ್ ಹನುಮ ಅಂದ್
ದುಷ್ಟ ಶಕ್ತಿ ರಾವಣನ ಮೆಟ್ಟಿ ನಿತ್ತತ್
ರಕ್ಕಸರ ಮಾಯಶಕ್ತಿ ಅಡಂಗಿ ಕುದ್ದತ್
ಗೆದ್ದ್ ಬಂದ ರಾಮ ಆಳ್ತ್ ಅಯೋಧ್ಯೆ ದೇಶನ
ಇಂದ್ ಬೇಕ್ ಅಂದ್‌ನಂಗೆ ಪ್ರಜಾಪಾಲನ
ರಾಮ ರಾಜ್ಯ ಯಾಗೊಳಿರ್‌ಲಿ ಬೇಡಿಕಂಬೊನೊ
ರಾಮ ರಾಜ್ಯ ಬೆಳ್ದ್ ನಿಲ್ಲಲಿ ಕನ್ಸ್ ಕಾಂಬೊನೊ

# ಮಡಿಕೇರಿ ದಸರ

ಎಲ್ಲೂ ಇಲ್ಲೆ ಇಂತ ಪೊರ್ಲು
ಬನ್ನಿ ನೋಡಿ ದಸರ
ಹಗ್ಲ್‌ಕ್ಕಿಂತ ಇರ್ಲ್ ಪೊರ್ಲು
ನಮ್ಮ ನಾಡ್ ದಸರ
ದಶಮಂಟಪ ಜಾತ್ರೆ ಇದ್
ವರುಷಕ್ಕೊಂದೇ ಉತ್ಸವ
ಹತ್ತ್ ಅಲ್ಲ, ಹನ್ನೊಂದುಟ್ಟು
ಮಂಟಪಗಳ ವೈಭವ
ನೂರ್ ಸೂರ್ಯ ಬೆಳಗುವಂಗೆ
ಮಡಿಕೇರಿ ಬೆಳ್ಗಿದೆ
ಪುರಾಣದ ಪುಣ್ಯ ಕಥೆ
ತೇರ್‌ಗಳ್‌ಲಿ ಕಂಡದೆ
ರಾಜ ಬೀದಿ ಬೀದಿಲೆಲ್ಲ
ಜನಸಾಗರ ಹರ್ದದೆ
ಬಂಗಾರದ ರಂಗ್‌ನಂಗೆ
ಕಟ್ಟಡೆಲ್ಲ ಹೊಳ್ದದೆ
ಮಂಜ್‌ನ ಕೋಟೆಯೊಳಗೆ
ಮಡಿಕೇರಿ ಕೊಣ್ದದೆ
ವ್ಯಾಪಾರಕೆ ಬಂದ ಜನ
ಪೀಪಿ ಊದಿ ಕರ್ದವೆ
ತರತರದ ವಸ್ತುಗೆಲ್ಲ
ದಾರಿ ಕರೆಲಿ ಇದ್ದವೆ
ಅಲ್ಲಿ ನುಗ್ಗಿ ಇಲ್ಲಿ ನಡ್ದ್
ಕೆಲವ್ ತಪ್ಪಿ ಹೋದವೆ
ಇಲ್ಲಿ ಕುದ್ದ್ ಅಲ್ಲಿ ಎದ್ದ್
ತೂಕಡಿಸಿ ಬಿದ್ದವೆ
ಮದ್ದ್ ಕುಡ್ದ ಮೀನ್‌ನಂಗೆ
ತೇಲಿಕಂಡ್ ನಡ್ದವೆ
ಇನ್ನೊಮ್ಮೆ ಬನ್ನೆತ್ತೇಳಿ
ಊರ್‌ಕಡೆ ಹೊರ್ಟವೆ



4

# ಸುಡುಕುಣಿ ಮತ್ತೆ ಮರ

ಸುಡುಕುಣಿ ನಡೂಲೊಂದ್ ಮಾವ್ನ ಮರ
ಅದರ ನೆಟ್ಟವ್ ಯಾರ್ ?
ನೆಟ್ಟತ್ಲೆ ಯಾರೂ
ಯಾಕೆತ್ತೇಳಿರೆ ಅದ್ ಕಾಡ್ ಮಾವ್ನ ಮರ
ಆ ಮರದ ವಯಸೆಷ್ಟ್? ಯಾರಿಗೆ ಗೊತ್ತುಟು ಹೇಳಿ ?
ಅದ್ ಬೆಳ್ದ್ ನಿತ್ತುಟು ಸುಡುಕುಣಿಗೆ ಸಾಕ್ಷಿಯಾಗಿ!
ಊರಿ ಬರುವ ಜನ ಜಾತಿ ಧರ್ಮತ್ತೇಳಿ ಹೊಡ್ಕಂಡ್ ಬಡ್ಕಂಡ್ ಸಾಯ್ತಾ ಒಳೊ
ಮರ ನೋಡ್ತಾ ಉಟ್ಟು
ಹೆಣನ ಅದೇ ಮರದ ಬುಡಲಿ ಹೂಣ್ತಾ ಒಳೊ. ಮರಕೆ ಗೊತ್ತುಟು
ನೀವ್ ಸೊಕ್ಕಿದವ್ ಸಾಯೆನಿ
ಎಲ್ಲಾ ಸತ್ತ ಮೇಲೆ ಈ ಭೂಮಿ ಯಾರಿಗೆ ? ಮರ ಕೇಳ್ತಾ ಉಟ್ಟು
ಕಾಲ ಕಾಲಕೆ ಮರ ಹೂವು ಬುಟ್ಟದೆ ಹಣ್ಣು ಕೊಟ್ಟದೆ
ಹೂವ್ ಯಾವ ಜಾತಿದ್ ? ಹಣ್ಣ್ ಯಾವ ಧರ್ಮದ್ ?
ಬೇರ್ ಹೀರ್ದ ಸಾರ್ ಯಾವ ಹೆಣದ್ ?

    ಅದ್ ನಿಂದ್ ಗುಡಿ, ಇದ್ ನಂದ್ ಗುಡಿ
    ಮಣ್ಣೊಳಗೆ ನಿಂಗೆ ಯಾವ ಗುಡಿ ?
    ಆ ದೇವ್ರು ಈ ದೇವ್ರು ಮಾದೇವ್ರು ನಂದ್
    ನಿನ್ನ ದೇವ್ರು ನಂಗೆ ಬ್ಯಾಡಾತ ಹೇಳ್ದವ್ನೂ ಸತ್ತತ್
    ಮಣ್ಣೊಳಗೆ ನಿಂಗೆ ಯಾವ ದೇವ್ರು ? ಮರ ನಗಾಡ್ತಾ ಉಟ್ಟು

ಹಕ್ಕಿಗ, ಕುಂಡತಗ, ಕೆಂಜೆರಿಗ, ಕಪಿಗ, ತುಂಬಿಗ, ಬಾವುಲಿಗ, ಗುಮ್ಮಗ.....
ಇನ್ನೆಂತೆಂತದೊ ಆ ಮರದ ಮನೆಲಿ......
ಹಾರಿವೆ ಹಾಡಿವೆ, ಸಂಸಾರ ಮಾಡಿವೆ
ನನ್ನದೇ ಎಲ್ಲಾತ್ತೇಳ್ಕಂಡ್ ಹೊಡ್ಕಂಡತ್ಲೆ ಬಡ್ಕಂಡ್ ಸತ್ತತ್ಲೆ
ಮಣ್ಣೊಳಗೆ ಮಲ್ಕಂಡ ಹೆಣಗಳೇ

    ಬೂದಿಯಾಗದೆ ಒಳ್ಕಂಡ ಮೂಳೆಗಳೇ
    ಬದ್ಕಿರಕನ ಎಂತ ಮಾಡೊಳರಿ?

        ಇರ್ಲಿ ಬುಡಿ, ಸತ್ತವ್ ಸತ್ತೊ
        ಜೀವಂತ ಇರ್‌ವ ನೀವ್ ಎಂತ ಮಾಡ್ತಾ ಒಳರಿ?

    ಮರ ಕೇಳ್ತಾ ಉಟ್ಟು, ಕೇಳಿಕಂಡೇ ಉಟ್ಟು.

# ಮುಂಗಾರ್ಮಳೆ

ಗುಡು ಗುಡು ಗುಡುಗಿತ್
ಮಿಣ ಮಿಣ ಮಿಣಿಗಿತ್
ಬೆಳ್ಳಿದ್ ಚಾಟಿ ಝುಳ್‌ಪಿತ್
ಗಗನದ ಬಗ್‌ತಲೆ ಬೆಳ್‌ಗಿತ್

ಬೀಸಿದ ಗಾಳಿಗೆ ಮರಗಿಡ ನಡ್‌ಗಿದೊ
ಮೈ ಮೇಲೆ ಬಂದಂಗೆ ನೆಲ ಮುಟ್ಟಿ ಎದ್ದೊ
ಹೋ... ಧೋ... ಒಂದೇ ಸದ್ದಾತ್
ಮಳೆ ಬಿದ್ದ್ ಭೂಮಿ ತಂಪಾತ್
ಬಯಲೆಲ್ಲ ಹಸ್ರುಕ್ಕಿ ಕೊಣ್ದಾಡ್ತ್

ಬೇಸಗೆ ಕಡೆ ಆಗಿ ಮುಂಗಾರ್ ಎದ್ರಾತ್
ತೋಡು ಹೊಳೆಲೆಲ್ಲ ನೀರ್ ಹರ್ತ್
ಹಳೆ ನೀರೆಲ್ಲ ಹರ್ದೋತ್

ಅಲೆ ಹಿಂದೆ ಅಲೆ ಬಂದಂಗೆ
ಹಳ್ತರ ಹಿಂದೆ ಹೊಸ್ತದಿದ್ದದೆ
ಹಳ್ತ್ ಹೊಸ್ತರ ಸಂಗಮ ಆಕನ
ಹೊಸದರ ಸೃಷ್ಟಿ ಆಗೋದೆ

# ದುಷ್ಟತನನ ಮೆಟ್ಟಿ ನಿಲ್ಲ್

ದೀಪ ಹೊತ್ತಿ ದೀಪ ಬೆಳ್‌ಗಿ ಲೋಕಕೆಲ್ಲ ಹರ್‌ಂಡಿದೆ
ಹಗ್‌ಲಿಗೊಂದ್ ಇರ್‌ಳಿಗೊಂದ್ ದೀಪ ಉಟ್ಟು ವಿಶ್ವಲಿ
ಜೀವ ಬಳ್ಳಿ ಹಬ್ಬುತುಟ್ಟು ನಿನ್ನ ಭವ್ಯ ಕರುಣೆಲಿ
ನೆಲ ನೀರ್‌ಲಿ ಜೀವ ಉಟ್ಟು ನಿನ್ನ ಸೃಷ್ಟಿ ನಿಯಮಲಿ

ಅನ್ನ ಕೊಟ್ಟ್ ನೀರ್ ಕೊಟ್ಟ್ ಜೀವ ಉಳ್ಸು ಕೇಳಿವೆ
ದುಕ್ಕ ಅಳ್‌ಸಿ ಸುಕನ ಬೆಳ್ಸಿ ಶಕ್ತಿ ಕೊಡು ಬೇಡಿವೆ
ಶಾಂತಿ ಕಲ್ಸಿ ಪ್ರೀತಿ ಬೆಳ್ಸಿ ಬಾಳ್ ಕಲ್ಸ್ ಲೋಕಲಿ
ಸೂರ್ಯ ಚಂದ್ರ ದೀಪ ಎರಡ್ ಸರ್ವ ಜೀವ ಕೋಟಿಗೆ

ಗಂಡ್ ಹೆಣ್ಣ್ ಎಲ್ಲ ಒಂದೆ ನಿನ್ನ ದಿವ್ಯ ದೃಷ್ಟಿಗೆ
ನಿನ್ನ ಮಡ್ಲ್ ಶಾಂತಿ ಗೂಡು ಕರ್‌ಕ ನಿನ್ನ ನೆರಳ್‌ಗೆ
ನಿನ್ನ ಕರುಣೆ ಬೇಕ್ ನಮಿಗೆ ನಮ್ಮ ಬದ್ಕ್ ಬೆಳ್ಗಿಕೆ
ದುಷ್ಟತನನ ಮೆಟ್ಟಿ ನಿಲ್ಲ್ ನಿನ್ನ ಮಕ್ಕ ಬಾಳಿಕೆ

# ಪುಣ್ಯ ಗಂಗೆ ಕಾವೇರಿ

ಭಾರತದ ಭಾಗ್ಯ ನೀನ್ ದೇವ ಗಂಗೆಯೇ
ತೆಂಕಣದ ಪುಣ್ಯ ಗಂಗೆ ಕಾವೇರಿಯೇ

ಬ್ರಹ್ಮಗಿರಿಲಿ ಕಣ್ಣ್ ಬುಟ್ಟ್, ಮೂಡಣಕೆ ದೃಷ್ಟಿ ನೆಟ್ಟ
ವರುಷ ವರುಷ ಜಾತ್ರೆ ನಿಂಗೆ ಕಾವೇರಿಯೇ

ಭೀಮ ಕಲ್ಲ್ ದಾಟಿಕಂಡ್ ಸುತ್ತ ಮುತ್ತ ನೋಡಿಕಂಡ್
ಪಾದ ಯಾತ್ರೆ ಸಾಗಿ ಹೋತು ಬ್ರಹ್ಮಗಿರಿಗೆ

ಬಂಧು ಬಳಗ ಕೂಡಿಕಂಡ್ ನಿನ್ನ ಧ್ಯಾನ ಮಾಡಿಕಂಡ್
ಬ್ರಹ್ಮಗಿರಿ ಹತ್ತಿ ನಿತ್ತ್ ಶರಣುತ್ತೇಳಿವೆ

ಭಕ್ತ ಜನರ ಪಾದ ಯಾತ್ರೆ, ಗಡಿಗೆ ತುಂಬ ಪುಣ್ಯ ತೀರ್ಥ
ಮನ್ಸ್ ತುಂಬ ನಿನ್ನ ಗ್ಯಾನ ದೇವ ಗಂಗೆಯೇ

ನೆರೆ ಕರೆ  ಕೂಡಿಕಂಡ್ ಗದ್ದೆಲೆಲ್ಲ ಬೆತ್ತ್ ಊರಿ
ದೋಸೆ ಬುತ್ತಿ ಗದ್ದೆಲಿಸಿ ಕೈ ಮುಗ್ದವೆ

ಕಡಿಕೆ ತುಂಬ ಕಾಳ್ ತುಂಬಿ ಕಾಪಾಡ್ ಭೂಮಿ ತಾಯಿ
ವರುಷ ವರುಷ ಬುತ್ತಿ ಇಸಿ ಕೈ ಮುಗ್ದವೆ

# ಅವ್ವ ನಿಂಗೆ ಕೋಟಿ ನಮನ

ಭೂಮಿ ಬೆಳ್ಕ್ ಗಾಳಿ ನೀರ್ ಲೋಕಕೇ ದೊಡ್ಡದ್
ಮಣ್ಣ್ ಕಲ್ಲ್ ಮರಗಿಡ ಎಲ್ಲಕ್ಕಿಂತ ಹಿರಿಯದ್

ಹಕ್ಕಿ ಪ್ರಾಣಿ ಸಸ್ಯ ರಾಶಿ ಒಂದಕ್ಕೊಂದ್ ಅಂಟ್ಕ್ಯೊಳೊ
ಗಾಳಿ ಬೆಳ್ಕ್ ಪೂಜಿ ಹೋದೆ ತಲೆ ಮೈ ಮನ್ಸ್‌ನ
ಮಳೆ ಸೊರ್ತ್ ನೀರ್ ಹರ್ತ್ ಭೂಮಿಯವ್ವ ಕಿಲಕಿಲ
ಮಂಜಿ ಸೊರ್ತ್ ತೊಟ್ಟು ತೊಟ್ಟು ಮರ ಗಿಡಗ ಕುಸಿ ಕುಸಿ
ಗಿಡಬಳ್ಳಿ ಚಿಗ್‌ರಿ ಕೊಣ್ತ್ ಗಾಳಿ ಬೀಸಿ ಬಾಕನ
ಹೂವ್ ಜೊಂಪೆ ಸೂಸಿತಾಗ ತನ್ನ ಎಲ್ಲ ಘಮ ಘಮ
ದುಂಬಿಗೆಲ್ಲ ಹಾರಿ ಬಂದೊ ರಸ ಹೀರಿ ಕೊಣಿಯಕೆ
ಹಕ್ಕಿಗೆಲ್ಲ ಪುಕ್ಕ ಕೆದ್‌ರಿ ಐಲಾಟಕೆ ಕೂಂಗಿದೊ
ಹುಲ್ಲು ತಂದೊ, ಕಡ್ಡಿ ತಂದೊ ಹೊಸಗೂಡು ಕಟ್ಟಿಕೆ
ಕಾಡೆಲ್ಲ ಗೂಡು ಆಗಿ ಜೀವ ತುಂಬಿ ಕೊಣ್ದದೆ
ರಸ ತುಂಬಿದ ಕಾಯಿ ಪೂರ ಹಣ್ಣಾಗಿ ಜೂಂಗಿದೆ
ಬೀಸಿ ಬಂದ ಗಾಳಿಗೆಲ್ಲ ಹಣ್ಣ್ ಬೀತ್ ತಟಪಟ
ಅದೂ ಬಾತ್ ಇದೂ ಬಾತ್ ಹಣ್ಣ್ ತಿಂದ್ ತೇಗಿದೊ

ಬದ್ಕ್ ಕೊಟ್ಟ ಭೂಮಿಯವ್ವ ಕೋಟಿ ಪುಣ್ಯ ನಿನ್ನದ್
ನಮೊ ಅವ್ವ ನಮೊ ಅವ್ವ ನಮೋ ನಮೋ ನಮಸ್ತೆ

# ಬದ್ಕ್‌ನ ಸಂತೆ

ಬಾಣೆದ್ ಸಂತೆಗೆ ಬಾಗ್‌ಲೇ ಇಲ್ಲೆ
ಸಂತೆಗೆ ದಾರಿ ಹತ್ತಾರ್
ಬದ್ಕ್‌ನ ಸಂತೆಲಿ ತರತರ ಮಾಲ್
ಸಂತೆನ ನೋಡುದೇ ಒಂದ್ ಪೊಲ್ಬು
ಬದ್ಕ್‌ನ ಸಂತೆನ ತಿರ್‍ಗಿ ಒಮ್ಮೆ ನೋಡ್
ಕಾಂಬ ಕಣ್ಣ್ ನಿಂಗಿರ್‍ಲಿ
ಸೊಕ್ಕ್‌ಲಿ ನೀನ್ ಆಡಿಕಂಡ್ ಹೋದರೆ
ಕೊಚ್ಚಿಕಂಡ್ ಹೋದಿಯ ಗೊತ್ತಿರ್‍ಲಿ
ಬದ್ಕ್‌ನ ದಾರಿಲಿ ಮರ್ಟ್‌ಕಂಡ್ ಕುದ್ದರೆ
ಮನೆಗೆ ಎತ್ತಕನ ಹೊತ್ತಾದೆ
ಬದ್ಕ್‌ನ ಬದ್ಕಿ ತೋರ್‍ಸದೆ ಹೋದರೆ
ರಕ್ತದ ಬೀರ್‍ಯ ಏನಾಕು ?
ಸಾವ್‌ನ ಮನೆಯ ಸೋದರ ಮಾವಂಗೆ
ದಂಡ್‌ಲಿ ಇಲ್ಲೆ ಸಂಬಂಧ
ಬಾಗ್ಲೇ ಇಲ್ಲದ ಬಾಣೆದ್ ಸಂತೆಲಿ
ನಮ್ಮೊಳಗಿರ್‍ಲಿ ಅನುಬಂಧ

# ಆಗ–ಈಗ

ಆಗ

ಉರಳಾಡಿಕಂಡ್ ಆಡ್ದ ಆಟ
ಹೊಟ್ಟೆ ತುಂಬ ನಗಾಡ್ದ ನಗೆ
ದಾರಿ ಉದ್ದೋಕೆ ಇದ್ದ ಕಾಡ್ ಹಣ್ಣ್
ಮರ್‍ಯಕಾದುಲೆ ಇಸ್ಕೂಲ್ ದಾರಿ
ಗದ್ದೆಲಿ ಸಿಕ್ಕ್‌ತಿದ್ದ ಮೀನ್
ತೋಟಲಿ ಸಿಕ್ಕ್‌ತಿದ್ದ ಅಳುಂಬು
ಗೈಪು ಒಟ್ಟಿಗೆ ರೊಟ್ಟಿ
ರೊಟ್ಟಿ ಒಟ್ಟಿಗೆ ಆಹಾ! ಕರಿ ಕಾಫಿ
ಕಾಯಿಲೆ ಇಲ್ಲೆ ಕಸಾಲೆ ಇಲ್ಲೆ
ಆದುಲೆತ್ತೇಳುವ ಮಾತೇ ಇಲ್ಲೆ

ಈಗ

ಹರಾ....ಇಲ್ಲೆ ಈ....ಇಲ್ಲೆ
ಬತ್ತದ ಬೆಳೆದ್ ನೋಟ ಇಲ್ಲೆ
ಕರಿ ಗುತ್ತಿಯೂ ಇಲ್ಲೆ, ಗುತ್ತಿಲಿ ಕೂರುವ ಹಕ್ಕಿನೂ ಇಲ್ಲೆ

ಉಪ್ಪಣ ಮಾಸದ ಗ್ಯಾನ ಬುಡಿ
ಕಾಡ್ ಮಾಸದ್ ಆಸೆ ಬುಡಿ
ಬೇಟೆಗೆ ಹೋದರೆ ಹಿಡ್ದ್ ಕೂಡ್ಸಿವೆ
ಯಾರಿಗೆ ಬೇಕ್ ಬೇಟೆ ಆಟ ?

ಕುದ್ದ್ ಉಂಬೊಕೆ ಪುರುಸೊತ್ತಿಲ್ಲೆ
ಮಕ್ಕಳೊಟ್ಟಿಗೆ ಮಾತೂ ಇಲ್ಲೆ
ಕಣ್ಣೂ ಕಾಂಬೊಲೆ, ಕೆಮಿನೂ ಕೇಳುಲೆ
ಆದೂ ಆಕು, ಹೋದೂ ಹೋಕು
ನಲವತ್ತರೊಳಗೆ ಎಲ್ಲಾ ಆಕು

# ನಾಡ್ ಮದ್ದ್

ಕಳ್ಂಜ ಕೊಡಿ
        ಜರಕ್ಕೆ ಮದ್ದ್
ಹಾಗಲ ಪಲ್ಯ
        ಹೊಟ್ಟೆಗೆ ಮದ್ದ್
ಪುದಿನ ಸೊಪ್ಪು
        ಹಲ್ಲ್‌ಗೆ ಮದ್ದ್
ಗರಿಕೆ ಹುಲ್ಲು
        ರಕ್ತಕೆ ಮದ್ದ್
ದಾಳಿಂಬೆ ಕೊಡಿ
        ಜುಲಾಪಿಗೆ ಮದ್ದ್
ದಾಸ್ವಾಳ ಹೂವು
        ಹೊಟ್ಟೆಗೆ ತಂಪು
ಬೆಣ್ಣೆಗಾರ್ತಿ
        ತಲೆಗೆ ತಂಪು
ಸಂಬಾರ ನೀರ್
        ಕಣ್ಣಿಗೆ ತಂಪು
ಬಸಳೆ ತಿಂದರೆ ಗಾಯಿಟರ್ ಇಲ್ಲೆ
ಬಾಯಿ ಹುಣ್ಣು ಹೇಳದೆ ಹೋದೆ
        ಯಾಲ  ಕಾಳ್, ಮೆಣ್ಸ್ ಕಾಳ್
        ಶುಂಠಿ ನಿಂಬುಳಿ ಬೇಕೇ ಬೇಕ್
        ಕಟ್ರೆ ಬೇರ್ ಕಟ್ರೆಗೆ ಬೇಕ್
        ಬೆಳ್ಳುಳ್ಳಿ ಇಲ್ಲರೆ ಹೆಂಗಾದು ?
ನಾಡ್ ಮದ್ದ್ ಕಾಡ್ ಮದ್ದ್
ಕೀಳಿಕೆ ಬತ್ತ್ ಕಡೆಕೆ ಬತ್ತ್
ನೂರ್ ಗಿಡಲಿ ನೂರ್ ಮದ್ದ್
ಹಿರಿಯವು ಹಂಗೆ ಹೇಳ್ತಿದ್ದೊ
ಕುಡಿಕೆ ಮದ್ದ್ ಕೊಡ್ತಿದ್ದೊ

# ಆಟಿ ಸಳಿ

ಉಯ್ಯವ್ವಯ್ಯೋ ಇದೆಂಥಾ ಸಳಿಯವ್ವಯ್ಯೋ
ದಾರಿ ಬುಡಿ ಮಕ್ಕಳೆ
ಬಿಸಿ ಬಿಸಿದೇನಾರ್ ಉಟ್ಟಾ ?
ಉಟ್ಟು, ಕಿಚ್ಚ್‌ನ ಕೆಂಡ !
ಅಂದರೆ ಹಸ್ನಕ್ಕಿ ಉಟ್ಟಾ ?
ಕಕ್ಕಡೆ ಎಸಂಡ್ ಉಟ್ಟಾ ?
ಆಟಿ ಹದ್ನೆಂಟ್ ಆತಾ ?
ಉಯ್ಯವ್ವಯ್ಯೋ ಇದೆಂಥಾ ಸಳಿಯವ್ವಯ್ಯೋ

ಆಟಿ ಕೋಳಿ ತಿನ್ನೊಕು
ಆಟಿ ಪಾಯ್ಸ ಉಂಬಕು
ನಾಟಿ ಓಟ ಓಡೊಕು
ನಾಟಿ ಕೆಲ್ಸ ತೀರ್ಸೊಕು
ಉಯ್ಯವ್ವಯ್ಯೋ ಇದೆಂಥಾ ಸಳಿಯವ್ವಯ್ಯೋ

ಕೈಲ್ ಪೋದ್ ಬಾಕಾತ್
ನಾವೂ ಬಂದವೆ, ನೀವೂ ಬನ್ನಿ
ಕೂಡಿ ಮಾಡನೊ ಹಬ್ಬನ
ಒಟ್ಟಿಗೆ ಬಾಳನೊ ನಾವೆಲ್ಲ
ಉಯ್ಯವ್ವಯ್ಯೋ ಇದೆಂಥಾ ಸಳಿಯವ್ವಯ್ಯೋ

# ಸ್ವಾಗತ

ತಿಂಗ ತುಂಬಿ ತುಂಬಿ ಬಾತ್ ಒಂಬತ್ತಾತ್ ನಿನ್ನೆಗೆ
ಹಗ್ಲ್ ಇರ್‌ಳ್ ಲೆಕ್ಕ ಬೇಡ ಭೂಮಿಗಿಳಿವ ಹೊತ್ತಿಗೆ
ಈಗ ಆಗ ಇಂದ್ ನಾಳೆ ಸ್ವಾಗತುಟ್ಟು ಕೂಸಿಗೆ
ಎಲ್ಲ ಕಾದ್ ಕುದ್ದೊಳಿಲ್ಲಿ ನಿನ್ನ ರೂಪ ಕಾಂಬಕೆ
ಯಾರ ಅಡ್ಡಿ ಇಲ್ಲೆ ಕಂದ ನೀನ್ ಕಲ್ತ ರಾಗಕೆ
ಹೊಸ ಗಾಳಿ, ಹೊಸ ಬೆಳ್ಕ್ ಹೊಸ ನೀರ್ ಬಾಳಿಗೆ
ಶುದ್ಧ ಆಗಿ ಸಿಕ್ಕಿರುಟ್ಟು ಕಂದ ನಿನ್ನ ಪುಣ್ಯಕೆ
ಸುಳ್ಳು ಮೋಸ ಬೇಡ ನಿಂಗೆ ಜಲ್ಮ ಜಲ್ಮ ಜಲ್ಮಕೆ

# ಬೇವು ಬೆಲ್ಲದ ಹೂರಣ

ಮಾವು ಬೇವುನ ತೋರಣ ಬೇವು ಬೆಲ್ಲದ ಹೂರಣ
ಕಷ್ಟ ಸುಖದ ಜೋಡಿಗೆ ನಮಿಗೆ ನಾವೇ ಕಾರಣ

ಹೊಸ ಕಾಲದ ಗಾಳಿಗೆ ಪರಿಮಳದ ನವಲೇಪನ
ನಿತ್ಯ ಹಾರುವ ದುಂಬಿಗೆ ಮಕರಂದದ ಭೋಜನ

ಮಾಮರದ ಚಿಗ್‌ರಿಗೆ ಕೋಗಿಲೆಗ ಮುತ್ತಿವೆ
ಹೂವು ತುಂಬಿದ ಜೊಂಪೆಗೆ ಜೇನ್ದುಂಬಿಗ ಕುದ್ದವೆ

ಗೂಡು ಬುಡುವ ಹಕ್ಕಿಗೆ ದಾರಿ ಉದ್ದಕೂ ಹಲ ಫಲ
ದುಡಿವ ಕೈಗೆ ಸಿಕ್ಕೇ ಸಿಕ್ಕೊಕು ದುಡಿದ ಶ್ರಮದ ಪ್ರತಿಫಲ

ಮೋಡಗೆಲ್ಲ ಜಾರಿ ಹೋದವೆ ಗಾಳಿ ಬೀಸುವ ರಭಸಕೆ
ಬಂದು ಹೋಗುವ ಜೀವಜಂತುಗ ಸೃಷ್ಟಿ  ನಿಯಮಕ್ಕೆ ಬಾಗಿವೆ

# ಸಂಸಾರ ಸಾಗರ

ಇದ್ ಭವ ಸಾಗರ, ಇದ್ ಭ್ರಮ ಸಾಗರ
ಇದ್ ನರ ಸಾಗರ, ಸಂಸಾರ ಸಾಗರ

ಅಗಲ ಅಳ್ದವೂ ಇಲ್ಲೆ, ಆಳ ತಿಳ್ದವೂ ಇಲ್ಲೆ,
ಅಳ್ದಷ್ಟ್ ಅಗಲ, ಇಳ್ದಷ್ಟ್ ಆಳ.

ಒಳಗುಟ್ಟು ಉಟ್ಟು ಕರಳ್‌ಬಳ್ಳಿಯ ಗಂಟ್
ಗಂಟೊಳಗೆ ಗಂಟ್ ಸಂಸಾರದ ಅಂಟ್

ನರನ ಆದಿ ತಿಳ್ದವ್ ಯಾರೊ? ನರನ ಅಂತ್ಯ ಕಂಡವ್ ಯಾರೊ?
ಆದಿ ಅಂತ್ಯದ ಅಂಟ್ ಬ್ರಹ್ಮಗಂಟ್

ಸಂಸಾರ ಸಾಗರಲಿ ಈಜ್‌ವಷ್ಟ್ ನೀ ಈಜ್
ಸೋತ್ ಹೋದರೆ ಹೋತ್ ಋಣ ಮುಕ್ತ್

ಪೂರ್ವ ಜಲ್ಮದ ಪುಣ್ಯ ನರನಾಗಿ ಸಿಕ್ಕುಟ್ಟು
ಮೂರ್ ದಿನದ ಬಾಳ್ ಮುತ್ತಾಗಲಿ

# ಅಬ್ಬಾ ! ಬೇಸಿಗೆ !!

ನೆಲ ಅಲ್ಲ ಇದ್ ಕಾದ ಕಾವ್‌ಲಿ
ಹೆಜ್ಜೆ ಇಸುದು ಹೆಂಗೆಯೊ?
ವರ್ಷ ವರ್ಷೊಳೂ ಜೀವ ಬುಟ್ಟವೆ
ಬಿಸ್ಲ್ ತಡೆಕೆ ಬೊತ್ತದೆ

ಹಗ್ಲ್ ಇರ್ಲ್‌ಗೆ ಭೇದ ಇಲ್ಲದೆ
ಧಗಧಗಿಸಿ ಬೆಂದವೆ
ಬೀಸ್ ಗಾಳಿಲಿ ಬಿಸಿಯೇ ತುಂಬಿಟ್ಟು
ತಂಪು ಹೆಂಗೆಯೊ ಗೊತ್ತ್‌ಲೆ

ದಾಹ ಹಿಂಗದೆ ಶಕ್ತಿ ಕುಂದಿದೆ
ಬಿದ್ದ್ ಸತ್ತವೆ ಹಕ್ಕಿಗ
ಎಷ್ಟ್ ಕುಡ್ದರೂ ಏನ್ ತಿಂದರೂ
ದಾಹ ನಿಲ್ಲದೆ ನುಗ್ಗಿದೆ

ಎಲ್ಲ ದನಕರ್ ಲಾಚಾರಾಗೊಳೊ
ಮೂಳೆ ಚಕ್ಕಳ ಹೊರ್‍ಟುಟು
ತೋಡು ಹೊಳೆ ಕೆರೆ ಬತ್ತಿ ಹೋಗುಟು
ಕಲ್ಲ್ ಬಂಡೆಗ ಕಂಡವೆ

ಹಬ್ಬ ಹುಣ್ಣಮೆ ಬಂದ್ ಹೋದವೆ
ಯಾವ ಕುಸಿಯೂ ಕಾಣದೆ
ಸೂರ್ಯನಂತೂ ಹೊತ್ತಿ ಉರ್‍ದದೆ
ಎಣ್ಣೆ ಬತ್ತಿಯೂ ಇಲ್ಲದೆ.

# ಅವ್ವ ಕಾವೇರಿ ನಿಂಗೆ ಅರ್ಪಣೆ

ಅವ್ವ ಕಾವೇರಿ ನಿಂಗೆ ಅರ್ಪಣೆ
ಅವ್ವ ಕಾವೇರಿ ನಿಂಗೆ ಸಮರ್ಪಣೆ

ಉಕ್ಕಿ ಹರಿವ ನಿಂಗೆ ಇದೊ ಸಾಷ್ಟಾಂಗ ವಂದನೆ
ಥಳುಕಿ ಬಳುಕಿ ಹರಿವ ನಿಂಗೆ ಸಾಷ್ಟಾಂಗ ವಂದನೆ
ಶುದ್ಧ ಜಲದ ನಿಂಗೆ ಇದೊ ಸಾಷ್ಟಾಂಗ ವಂದನೆ
ಜೀವ ಜಲದ ನಿಂಗೆ ಇದೊ ಸಾಷ್ಟಾಂಗ ವಂದನೆ

ಅಂದ್ ಇಂದ್ ಎಂದಿಗೂ ಪುಣ್ಯ ಜಲದ ಸಂಗಮ
ಮೀದ ಜನಕೆ ಸಿಕ್ಕಿದೆ ಪಾವನ ಸಂಗಮ
ಸುತ್ತಮುತ್ತ ಕೇಳಲಿ ಐಕ್ಯತೆಯ ಸರಿಗಮ
ಲೋಕ ಜನಕೆ ಸಿಕ್ಕಿದೆ ಮನ ಮಿಡಿವ ಸರಿಗಮ

ಅಲ್ಲಿ ಇಲ್ಲಿ ಎಲ್ಲೂ ಉಟ್ಟು ಅರಳಿ ನಿತ್ತ ವನಸುಮ
ಮೆದು ಗಾಳಿಗೆ ಬೀಸಿ ಬಾತ್ ಹೊಸ ಹೂಗಳ ಘಮಘಮ
ದಶ ದಿಕ್ಕಿಗೂ ಕೇಳುತುಟ್ಟು ಕಾವೇರಿಯ ಕಲರವ
ರೈತ ಮೊಕಲಿ ಕಾಣುತುಟ್ಟು ಮಂದಹಾಸ ವೈಭವ

ಮಲ್ಲಿಗೆ ಘಮ ಘಮ । ಸಂಪಿಗೆ ಘಮ ಘಮ
ನಮ್ಮನೆಗೆ ನೀನ್ ಸರಿಗಮ ।೨।
ಕಂದ । ಮನೆಯವುಕೆ ಯಾಗೊಳು ಸಂಭ್ರಮ

ಸೂರ್ಯ ಚಂದ್ರರ್ । ಭೂಮಿನ ಬೆಳ್‌ಗಿವೆ
ನೀ ಬೆಳ್‌ಗ್ ನಮ್ಮ ನಾಡ್‌ನ ।೨।
ಕಂದ । ಜ್ಞಾನಂದ ನೀ ಬೆಳ್‌ಗ್ ಬಾಳ್‌ನ

ಪೇರಲ ಮರ ತುಂಬ । ಗಿಣಿ ಹಕ್ಕಿ ಕುದ್ದೊಳೊ
ನೋಡೊಮ್ಮೆ ನೀನ್ ತಲೆಯೆತ್ತಿ ।೨।
ಕಂದ । ತಿಂದರೆ ತಿನ್ನಲಿ ಹಕ್ಕೀಗ

ಮಾವುನ ಮರ ತುಂಬ । ಹಸ್ರಕ್ಕಿ ಕುದ್ದೊಳೊ
ನೋಡೊಮ್ಮೆ ನೀನ್ ಹೊರ ಬಂದ್ ।೨।
ಕಂದ । ಕುದ್ದರೆ ಕೂರ್‌ಲಿ ಮರ ತುಂಬ

ಸುಂಟರ ಗಾಳಿ । ಸುಳಿಗಾಳಿ ಬೀಸಿದೆ
ಬೀಸಿರೆ ಬೀಸಲಿ ಸುಳಿಗಾಳಿ ।೨।
ಕಂದ । ನಮ್ಮನೆಗೆ ನೀನ್ ಮೆದುಗಾಳಿ

ಕುಂಡತ್ತ ಚೀಂವ್ ಚೀಂವ್। ಹಕ್ಕೀಗ ಚಿಲಿಪಿಲಿ
ಮನೆಯವ್‌ಕೆ ನೀನ್ ಕೋಗಿಲೆ ।೨।
ಕಂದ । ಪದ ಹೇಳ್ ನೀನ್ ದೊನಿಯೆತ್ತಿ

ಹೊಸ್ತಿಲ್ ದಾಟೊಕು । ಅಂಗಳಕ್ಕಿಳಿಯೊಕು
ಸುತ್ತಮುತ್ತೆಲ್ಲ ನೋಡೊಕು ।೨।
ಕಂದ । ಹತ್ತರೊಟ್ಟಿಗೆ ನಾವ್ ಬದ್ಕೊಕು

ಅಮಾಸೆ ಹುಣ್ಣಮೆ । ನಿಸರ್ಗದ ನಿಯಮ
ನಿನ್ನಲ್ಲಿ ಇರ್‍ಲಿ ಗುರುಗಳ ನಿಯಮ ।೨।
ಕಂದ । ಬದ್ಕೊಕು ಯಾಗೊಳು ನಿಯಮಂದ

ಹೋದಲ್ಲಿ ನೀ ಬಾಳ್ । ಬಂದಲ್ಲಿ ನೀ ಬಾಳ್
ಹೋದಲ್ಲಿ ಬಂದಲ್ಲಿ ನೀ ಬಾಳ್ ।೨।
ಕಂದ । ಎಲ್ಲೆಲ್ಲೂ ನೀ ಬಾಳ್ ಪೊರ್ಲ್‍ಂದ

ಅಕ್ಕಯ್ಯ ಓದಿದೆ । ಅಕ್ಕಯ್ಯ ಬರ್ದದೆ
ಅಣ್ಣಯ್ಯ ನೀ ಓದಿ ಬರ್ಯೋಕು ।೨।
ಕಂದ । ನೀವಿಬ್ಬರು ಕುಟುಂಬಕ್ಕೆ ಹೆಸ್ರಾಕು

ಕೈ ಕೈ ಕೂಡಿರೆ । ಹಗುರಾದೆ ಕೆಲ್ಸ
ಕೂಡಿ ಉಂಡರೆ ಸುಖ ಉಟ್ಟು ।೨।
ಕಂದ । ಸಿಕ್ಕಲಿ ನಿಂಗೆ ಸುಖ ಬಾಳ್

ನೀರ್‍ಲಿ ಮೀನ್ । ಗಾಳೀಲಿ ಹಕ್ಕಿ
ಭೂಮೀಲಿ ಬಂಧು ಬಳಗೆಲ್ಲ ।೨।
ಕಂದ । ಭೂಮೀಲಿ ಬದ್ಕೊಕು ನಾವೆಲ್ಲ

ಬೊಪ್ಪೋಳೆ ಬೆಳಿ ಸಾಳ್ । ಬೆಟ್ಟಕ್ಕೆ ಮಣಿಸರ
ಮುತ್ತುನ ಸರ ನಿಂಗುಟ್ಟು ।೨।
ಕಂದ । ಸೊಂಟಕ್ಕೆ ಉಟ್ಟು ನೇವಾಳ

ಮಿಣ್ಕಿದೆ ಮಿಣ್ಕುಳ ಬಾಂಗೀದೆ ಮಳೆ ಬಿಲ್ಲ್
ಹೊಳ್ದವೆ ನಿನ್ನ ಕಣ್ಣ್‌ಗ ।೨।
ಕಂದ । ನೂರೆಂಟ್ ಆಸೆ ಅಲ್ಯುಟ್ಟು

ಹಗ್ಲ್‌ಗೆ ಸೂರ್ಯ । ಇರ್ಲ್‌ಗೆ ಚಂದ್ರ
ಹಗ್ಲ್ ಇರ್ಲ್‌ಗೆ ನೀಯೆಲ್ಲ ।೨।
ಕಂದ । ನೀ ಸೂರ್ಯ ಚಂದ್ರನೇ ನಮಿಗೆಲ್ಲ

ಕಾಪು ಕಟ್ಟೊಳೆ । ಕರಿ ಕೋಳಿ ಕೂರ್ಸೊಳೆ
ಇಪ್ಪತ್ತರ ಮೇಲೆ ಒಂದಾತ್ ।೨।
ಕಂದ । ಕಾಪು ಇಳ್ಸನೊ ಎದ್ದೇಳ್

ಅಪ್ಪಾ ಅಪ್ಪಯ್ಯ । ಅಪ್ಪಯ್ಯ ಅಪ್ಪಯ್ಯ
ಅಪ್ಪಯ್ಯ ಹೋಗುಟು ಸಂತೆಗೆ ।೨।
ಕಂದ । ಹೊಸ ಕುಪ್ಪ ತಂದದೆ ಕೂಸಿಗೆ

ಅಕ್ಕಾ ಅಕ್ಕಯ್ಯ । ಅಕ್ಕಯ್ಯ ಅಕ್ಕಯ್ಯ
ಅಕ್ಕಯ್ಯ ಹೋಗುಟ್ಟು ಇಸ್ಕೂಲಿಗೆ ।೨।
ಕಂದ । ನೀ ಹೋಕು ನಾಳೆಂದ ಅವ್ಳೊಟ್ಟಿಗೆ

ಮರ ಬಾಳೆ ಹೂ ಬಾಳೆ । ರಸ ಬಾಳೆ
ತಂಬಿಟ್ಟಿಗೆ ಲಾಯ್ಕಾದೆ ಮರ ಬಾಳೆ ।೨।
ಕಂದ । ತಿಂಬಕ್ಕೆ ಲಾಯ್ಕಾದೆ ರಸಬಾಳೆ

ಕೊಸ್ಲಕ್ಕಿ ಹೊರ್ದೊಳೆ । ಕೊಸ್ಲಕ್ಕಿ ಬೀಸಿಯೊಳೆ
ತಿಂಬಕ್ಕೆ ತಂಬಿಟ್ಟ್ ಮಾಡ್ಯೊಳೆ ।೨।
ಕಂದ । ತಂಬಿಟ್ಟ್ ತಿಂಬನೊ ಎದ್ದೇಳ್

ಕತ್ತಲೆ ಕರಿಕಪ್ಪು । ಕಾಗೆದ್ ಮೈ ಕಪ್ಪು
ಕರಿ ದ್ರಾಕ್ಷೆ ಹಣ್ಣ್ ಬಲುಕಪ್ಪು ।೨।
ಕಂದ । ಅದಕ್ಕಿಂತ ಕಪ್ಪು ನಿನ ಕಣ್ಣ್

ಗಿಣಿ ಗಿಣಿ ಗಿಣಿ ಗಿಣಿ । ಗಿಣಿ ಗಿಣಿ ಗಿಣಿ ಗಿಣಿ
ಹೋದಲ್ಲಿ ಬಂದಲ್ಲಿ ಗಿಣಿ ಗಿಣಿ ।೨।
ಕಂದ । ನಿಂಗೆಲ್ಲ ಅದ್ ಬೇಡ ನಿಸ್ತಂತ್

ಊರಿಗೆ ಉಪಕಾರ । ನಾಡಿಗೆ ಉಪಕಾರ
ಊರು ನಾಡಿಗೆ ಉಪಕಾರ ।೨।
ಕಂದ । ಪ್ರತಿಯಾಗಿ ಗ್ಯಾನ ಮಾಡ್ಬೇಡ

ಅಧಿಕಾರ ಬಂದದೆ । ಅಧಿಕಾರ ಹೋದೆ
ಅಹಂಕಾರ ಬೇಡ ಯಾಗೊಳು ।೨।
ಕಂದ । ಅಧಿಕಾರ ಇರ್ದುಲೆ ಕಡೆಮುಟ್ಟ

ಬೆಳ್ಳಿ ಮೂಡಿಟ್ಟು । ಎದ್ದೇಳ್ ಕಂದ
ಮೂಡಲಿ ಕಣ್ಣ್ ಬುಡಿಕಾತ್ ।೨।
ಕಂದ । ಅಪ್ಪ ಎದ್ದೋತ್ ಗದ್ದೆಗೆ

ಅಂಗಳ ಕರೆಲಿ । ಹೂವುಗಿಡ ನೆಟ್ಕೊಳಿ
ಗಿಡ ತುಂಬ ಮೊಗ್ಗು ಮೂಡಿಟ್ಟು ।೨।
ಕಂದ । ಗಿಡಕೆಲ್ಲ ನೀರ್ ಹಾಕೊಕು

ಗಿಡ ತುಂಬ ಹೂವ್ । ತುಂಬಿಟ್ಟು ನೋಡು
ತುಂಬಿಗ ಹಾರ್ಯಾಡಿ ಪದ ಹೇಳಿವೆ ।೨।
ಕಂದ । ರಾಗಾಗಿ ನೀನೂ ಪದ ಹೇಳ್

ಮಲ್ಲಿಗೆ ಹೂವುಟ್ಟು । ಸೇವಂತಿಗೆ ಹೂವುಟ್ಟು
ಗಿಡ ತುಂಬ ಗೋರಟೆ ಹೂವುಟ್ಟು ।೨।
ಕಂದ । ಮರತುಂಬ ಸಂಪಿಗೆ ಅರಳಿಟ್ಟು

ಅಂಗಳ ಗುಡ್ಸೊಕು । ಸಗಣಿ ಸಾರ್ಸೊಕು
ರಂಗೋಲಿ ಗೆರೆ ಹಾಕೋಕು ।೨।
ಕಂದ । ನೀನೂ ರಂಗೋಲಿ ಕಲಿಯೊಕು

ನಾಕಲ್ಲ ಐದಲ್ಲ । ಹತ್ತಾರ್ ಕೋಲು
ಆಳಲಿ ಉಟ್ಟು ತಿಳಿ ನೀರ್ ।೨।
ಕಂದ । ನಾ ಬಾಕೆ ಮುಟ್ಟ ನೀ ಮನೆಲಿರ್

ಒಂದಾರಿ ನೀರ್ । ತಾಕುಟ್ಟು ಮನೆಗೆ
ತನ್ನೆ ನಾ ನೀ ಚೆಲ್ಲ್ ಬೇಡ ನೀರ್ ।೨।
ಕಂದ । ನಾ ಹೇಳ್ವ ಮಾತ್ ನೀ ಮರಿ ಬೇಡ

ಒಮ್ಮೆಗೆ ಒಂದಾರಿ । ಮೂರ್ ಬಿಂದಿಗೆ ನೀರ್
ತಲೆ ಸೊಂಟ ಕೈಲೊಂದ್ ಬಿಂದಿಗೆ ।೨।
ಕಂದ । ನಿಂಗೆಂದೂ ಬೇಡ ಈ ಪಾಡ್

ನೀರ್ ದಾರಿದ್ ದೂರ । ಗೋಂಚು ಬಾಮಿಗೆ ದೂರ
ಸೌದೆ ಸೊಪ್ಪಿಗೆ ಬಲು ದೂರ ।೨।
ಕಂದ । ಕೈಲಿಲ್ಲರೆ ಸಂಬಂಧ ದೂರಾದೆ

ಹುಟಿದ ಮನ್ಸರ್‌ಲಿ । ದೊಡ್ಡವ್ ಯಾರಿಲ್ಲೆ
ಹುಟ್ಟಿದ ಎಲ್ಲವ್ ಸಮಯೆಲ್ಲ ।೨।
ಕಂದ । ತಿಳ್ಕಂಡ್ ಬದ್ಕಿರೆ ಸವಿಬೆಲ್ಲ

ಮೂಡುದು ಗೊತ್ತುಟ್ಟು । ಕಂತುದು ಗೊತ್ತುಟ್ಟು
ಸೂರ್ಯ ಚಂದ್ರಂಗೆ ಗೊತ್ತುಟ್ಟು ।೨।
ಕಂದ । ನಿಸರ್ಗ ನಿಯಮ ಮಾಡಿಟ್ಟು

ಕೊಟ್ಟಾಡಿ ಕೋಣೆಯೊಕು । ಹಸ್ತರೆ ಉಂಬೊಕು
ಕುಸಿಪಟ್ಟ್ ಊಟ ಮಾಡೊಕು ।೨।
ಕಂದ । ಉಂಡಂಗೆ ಒಂದಷ್ಟ್ ನಡಿಯೊಕು

ಹೊತ್ತಿಗೆ ಊಟ ಮಾಡ್ । ಹೊತ್ತೊತ್ತಿಗೆ ಊಟ ಮಾಡ್
ಬಿಕ್ಕನೆ ಬಿರಿಯಾನೆ ತಿನ್ಬೇಡ ।೨।
ಕಂದ । ಮಿತ ಊಟ ನಿಂಗೆ ಸುಕ ಊಟ

ಸುಡ ಸುಡ ತಿನ್‌ಬೇಡ । ಸುಡಸುಡ ಕುಡಿಬೇಡ
ಹಳ್‌ಸಿದ್ ಯಾವ್ದು ತಿನ್ಬೇಡ ।೨।
ಕಂದ । ಮರ್‌ಡ್‌ವ ಹೊಟ್ಟೆಲಿ ಇರ್ಬೇಡ

ನಾಡಿಗೆ ದಾರಿಟ್ಟು । ಕಾಡಿಗೆ ದಾರಿಟ್ಟು
ಕಾಡ್ ನಾಡಿಗೆ ದಾರಿಟ್ಟು ।೨।
ಕಂದ । ನಿನ್ನದೆ ದಾರಿ ನಿಂಗುಟ್ಟು

ಆಡಕನ ಆಡೊಕು । ಓಡಕನ ಓಡೊಕು
ಓದಕನ ಲಾಯ್ಕ ಓದೊಕು ।೨।
ಕಂದ ಕಾಲ ಕಾಲಕೆ ಎಲ್ಲ ಸರಿ ಆಕು

ಉಗುರು ತೆಗಿಬೇಡ । ತಲೆ ಬಾಚ್ ಬೇಡ
ಮನೆಯೊಳಗೆ ಈ ಕೆಲ್ಸ ಮಾಡ್ ಬೇಡ ।೨।
ಕಂದ । ಉಗುರು ಕಚ್ಚುದು ಎಂದೂ ಮಾಡ್‌ಬೇಡ

ಆರಕ್ಕೆ ಏರ್‌ಬೇಡ । ಮೂರಕ್ಕೆ ಇಳಿಬೇಡ
ತಲೆ ಹೊಡ್ದ್ ಸಂಪಾದ್ನೆ ಮಾಡ್‌ಬೇಡ ।೨।
ಕಂದ । ಕಂಡವರ ಸೊತ್ತು ನಿಂಗ್ಬೇಡ

ಆದರೆ ಆಗಲಿ । ಹೋದರೆ ಹೋಗಲಿ
ಅಡ್ಡ ಗೋಡೆಲಿ ದೀಪ ಇಸ್‌ಬೇಡ ।೨।
ಕಂದ । ಹೇಳ್ದರ ನೀ ಸರಿ ಹೇಳ್

ಪಿಸಿ ಪಿಸಿ ಮಾತ್ । ಗುಸು ಗುಸು ಮಾತ್
ಗಡ ಗಡ ಮಾತ್ ಸುಡು ಮಾತ್ ।೨।
ಕಂದ । ಪರಪರ ಮಾತ್ ಹಗುರಾದೆ

ಹಾಸಿಗೆ ಇದ್ದಷ್ಟ್ । ನೀಂಡೊಕು ಕಾಲ್
ಅಗತ್ಯಕೆ ಆಡೊಕು ತೂಕದ ಮಾತ್ ।೨।
ಕಂದ । ಹಿಡ್ತಂದ ಆಡೊಕು ಸರಿ ಮಾತ್

ಗುಂಪುಲಿ ಕಿತ್ತಾಟ । ಚೆಲ್ಲಾಟ ಆದೆ
ಯಾರಿಗೂ ಸಿಕ್ಕದೆ ಹಾಳಾಗಿ ಹೋದೆ ।೨।
ಕಂದ । ನಿಯತ್ತಿಲ್ಲರೆ ನೀರಿಗೆ ಹೋಮಾದೆ

ಧಗ ಧಗ ಕಿಚ್ಚ್‌ಗೆ । ಕಾಚಲ್ ಕಮ್ಮಿ
ನಿಧಾನ ಕಿಚ್ಚ್‌ಗೆ ಕಾಚಲ್ ಜಾಸ್ತಿ ।೨।
ಕಂದ । ಸಮಾಧಾನದ ಕೆಲ್ಸ ಅಚ್ಚ್‌ಕಟ್

ಆದೋ ಹೋದೋ । ಆಕಿಲೆ ಹೋಕಿಲೆ
ಮಂತ್ರಕೆ ಕಾಯಿ ಉದ್ರುಲೆ ।೨।
ಕಂದ । ಬರಿ ಕೈಲಿ ಮೊಳ ಹಾಕ್ ಬೇಡ

ಕುದ್ದವ್ ಆಡಿವೆ । ನೂರೆಂಟ್ ಮಾತ್
ನಡ್ಯವ್ ಎಡ್ಗಿವೆ ಹಿರಿಯರ ಮಾತ್ ।೨।
ಕಂದ । ನೋಡವ್ ಆಡವ್ ಲೆಕ್ಕಂದ ಹೊರಗೆ

ಮೆರ್‍ಯೆವ್ ಮೆರ್‍ಯೆಲಿ । ಅವ್‌ಕಿಲ್ಲೆ ಕ್ಯಾಮೆ
ಅಲ್ಲಿ ಇಲ್ಲಿ ಕಳಿಬೇಡ ಸುಮ್ಮನೆ ।೨।
ಕಂದ । ಹೇಳಿನೆ ನಾನ್ ಮನ್ಸಿಟ್ಟ್ ಕೇಳ್

ಹರ ಹರ ಶಿವ ಶಿವ । ಹೇಳಿರೂ ನೀನ್
ಹೆತ್ತವರ ಗ್ಯಾನ ಮಾಡೊಕು ।೨।
ಕಂದ । ಹಿರಿಯರ ಗೌರವಂದ ಕಾಂಬೊಕು

ಹಣನೂ ಬಂದದೆ । ಆಸ್ತಿನೂ ಬಂದದೆ
ಅದೆಲ್ಲ ಹೊಳೆದ್ ಇಳಿ ನೀರ್ ।೨।
ಕಂದ । ಬೆರಳ್‌ಗ ಯಾಗೊಳು ಸಮಯಿಲ್ಲೆ

ಅವೂ ಒಳೊ ಇವೂ ಒಳೊ । ಕೈಲಿರಕನ ಎಲ್ಲವ್ ಒಳೊ
ನಮ್ಮ ತಲೆಗೆ ನಮ್ಮ ಕೈ ।೨।
ಕಂದ । ಹಿರಿಯರ ಮಾತ್ ತಪ್ಪಲ್ಲ

ಹೇಳಿಪಟ್ಟೊಳೊ । ಕೇಳಿಪಟ್ಟೊಳೊ
ಭಾರಿ ಉಟ್ಟುತ ಹೇಳ್ತೊಳೊ ।೨।
ಕಂದ । ಒಳಗೆನ ಗುಟ್ಟು ಕಂಡವ್ ಯಾರೊ ?

ಇರ್‌ಳ್‌ಗೆ ಬೆಳ್ಕ್‌ಗೆ । ರೂಪನೆ ಇಲ್ಲೆ
ಗಾಳಿಗೆ ನೀರ್‌ಗೆ ತಡಿನೆ ಇಲ್ಲೆ ।೨।
ಕಂದ । ರೂಪಂದ ನಾವ್ ಬಾಳಿವೆ ಇಲ್ಲೆ

ದೇವರ ಕೋಣೆಗೆ । ಹಾಕೊಳೊ ಬೀಗ
ಬೀಗದ ಎಸಳ್ ಬಿದ್ದೋತ್ ।೨।
ಕಂದ । ದೇವರ ಮೇಲೇ ಸಂಶಯ ಯಾಕೆ ?

ನೂರಾರ್ ತ್ರಿಪದಿ । ಬರ್ದೊಳೆ ನಾನ್
ನೂರೆಂಟ್ ಕೆಲ್ಸಲೂ ಓದೊಕು ನೀನ್ ।೨।
ಕಂದ । ಬದ್ಕ್‌ಗೆ ಬೇಕಾದ್ದರ ಹೆರ್ಕಿಕ ನೀನ್

ಓಡ್ದೆ ಕಾಲ ಚಾಲಕ ಬೇಡ । ಅದ್ಕೆ ದಾರಿ ಗೊತ್ತುಟ್ಟು
ಕಾಲದ ಒಟ್ಟಿಗೆ ಓಡೊಕು ನಾವ್ ।೨।
ಕಂದ । ಓಡುವ ದಾರಿ ಗೊತ್ತಿರೊಕು.

ಒಂದಲ್ಲ ಹತ್ತುಟ್ಟು । ಓದುವ ಅವಕಾಶ
ಸೊಂತ ಬುದ್ಧಿಯು ನಿಂಗಿರೊಕು ।೨।
ಕಂದ । ದೇಶದ ಸೊತ್ತು ನೀನಾಕು

ಹಣ ಹಣತ್ತೇಳಿರೆ । ಹೆಣ ಬಾಯಿ ಬುಟ್ಟದೆ
ಹಣದೊಟ್ಟಿಗೆ ಗುಣ ಸೇರೊಕು ।೨।
ಕಂದ । ಆರೋಗ್ಯದೊಟ್ಟಿಗೆ ಭಾಗ್ಯ ಜೊತೆಯಾಕು

ಎಲ್ಲಾ ಗೊತ್ತುತ । ಕೊಣಿಬೇಡ ಯಾಗೊಳು
ಗೊತ್ತಿದ್ದರೆ ಗೊತ್ತಿರ್‌ಲಿ ನಿನ್ನಲ್ಲಿ ।೨।
ಕಂದ । ಚೈಗುಡುವ ನಾಯಿಗೆ ಬೆಲೆಯಿಲ್ಲೆ

ದೂರವ್ ಇದ್ದವೆ । ದೂರಲಿ ಅಲ್ಲ
ಅಲ್ಲೇ ಇದ್ದವೆ ಎಡ ಬಲಲಿ ।೨।
ಕಂದ । ದೂರವ್ ಇರೊಕು ನಮ್ಮೊಳಗೆ

ಮಾಡವ್ ಐದ್ । ನೋಡವ್ ಹತ್ತ್
ಆದರೂ ಆಕಿಲೆ ಮಾಡುವ ಕೆಲ್ಸ ।೨।
ಕಂದ । ಮಾತ್‌ನ ಮಲ್ಲರ್ ನಾವೆಲ್ಲ

ಭಾಷೆನ ಕೊಟ್ಟೋಳೊ । ಭಾಷೆನ ಕಲ್ತೊಳೊ
ಮಾತಾಡದೆ ಇದ್ದರೆ ಸತ್ತೋದೆ ।೨।
ಕಂದ । ಭಾಷೆನ ಕೊಲ್ಲುವ ಕೆಲ್ಸ ಮಾಡ್ಬೇಡ

ಹೆತ್ತವ್ ದೊಡ್ಡವ್। ಹೊತ್ತವ್ ದೊಡ್ಡವ್
ಭಾಷೆನೂ ಅಷ್ಟೇ ದೊಡ್ಡದ್ ।೨।
ಕಂದ । ಎದೆ ತಟ್ಟಿ ನೀ ಮಾತಾಡ್

ಸಾವ್ರಾರ್ ಭಾಷೆಗ । ಲೋಕಲಿ ಉಟ್ಟು
ಅರೆಭಾಷೆ ಅದರ್ಲಿ ಸೇರಿಟ್ಟು ।೨।
ಕಂದ । ಮಾತಾಡ್ ನೀ ಎದೆಯುಬ್ಬಿ

ಅಷ್ಟುದ್ದ ಹೇಳ್ದರ ಇಷ್ಟುದ್ದಲಿ ಹೇಳಕ್
ಅರೆಭಾಷೆ ಗುಟ್ಟು ಒಳಗುಟ್ಟು ।೨।
ಕಂದ । ಆಡುವ ಮಾತ್ ಪೊರ್ಲುಟ್ಟು

ಆ ಭಾಷೆ ಈ ಭಾಷೆ । ಗುದ್ದಾಟ ಬೇಡ
ಎಲ್ಲಾ ಭಾಷೆಲೂ ರಸವುಟ್ಟು ।೨।
ಕಂದ । ಯಾವ ಭಾಷೆನೂ ಕೀಳಲ್ಲ

ಭಾಷೆನ ಕೊಟ್ಟ । ಪುಣ್ಯಾತ್ಮರ್ ಯಾರೊ
ಅವ್ ಇಲ್ಲೆ ಈಗ ಕಣ್ಮುಂದೆ ।೨।
ಕಂದ । ಆ ಹಿರಿಯವ್ರುಕೆ ತಲೆ ಬಾಗನೊ

ಹಬ್ಬ ಹಬ್ಬಲಿ ನಾವ್ । ಒಂದಾಗಿ ಕೂಡೊಕು
ಐನ್ ಮನೆಲಿ ಕೂಡಿ ಉಂಬೊಕು ।೨।
ಕಂದ । ಜಗಳ ಬುಟ್ಟ್ ಬಾಳಿ ಬದ್ಕೊಕು

ಅಂಜೂರಕ್ಕೆ ಹೂವಿಲ್ಲೆ । ಅತ್ತಿಗೂ ಹೂವಿಲ್ಲೆ
ಯಾಕೆತ ಮಾತ್ರ ಗೊತ್ತಿಲ್ಲೆ ।೨।
ಕಂದ । ಕಂಡವ್ ನಮ್ಮಲ್ಲಿ ಯಾರಿಲ್ಲೆ

ಆ ನಾಡ್ ಈ ನಾಡ್ । ನಡೂಲೊಂದ್ ನಾಡ್
ಮದೆನಾಡ್ತ್ತೇಳುವ ನಾಡುಟ್ಟು ।೨।
ಕಂದ । ಮಾದೂರಪ್ಪನ ಗುಡಿ ಅಲ್ಯುಟ್ಟು

ಸುತ್ತ ಮುತ್ತೆಲ್ಲ ಕಾಡುಟ್ಟು । ಅಲ್ಲೊಂದ್ ದೇವರ ಬನವುಟ್ಟು
ಕಾಡ್‌ಲಿ ಅಯ್ಯಪ್ಪನ ಗುಡಿಯುಟ್ಟು ।೨।
ಕಂದ । ಸುತ್ತ ಮುತ್ತೆಲ್ಲ ನೀರ್ ಹರಿತುಟ್ಟು

ಗುಡುಗುಡು ಸುಡುಸುಡು । ಉರಿ ದುಂಡು ಬೇಡ
ಸಿಡ್ಕಿರೆ ದುಡ್ಕಿರೆ ಬದ್ಕೆಲ್ಲ ಪಾಡ್ ।೨।
ಕಂದ । ಇರುವಲ್ಲೆ ಕಾಂಬೊಕು ಸ್ವರ್ಗದ ನಾಡ್

ಸಂಶಯ ಯಾಗೊಳು । ಪಾಷಾಣ ಆದೆ
ಇದ್ದದ್ ಹೇಳ್ರೆ ಕುತ್ತಿದಂಗೆ ಆದೆ ।೨।
ಕಂದ । ಸತ್ಯಕ್ಕೆ ಬೆಲೆ ಬಾಕನ ತಡ ಆದೆ

ಐದಿಲ್ಲೆ ಹತ್ತಿಲ್ಲೆ । ಇರ್ದೊಂದೇ ನೀನ್
ನೀನೊಂದೆ ಕುಟುಂಬಕ್ಕೆ ಹೇಳೀನೆ ನಾನ್ ।೨।
ಕಂದ । ನಾಡ್‌ನಾಡ್‌ನ ಮನೆಮನೆ ಮಾತಾಕು ನೀನ್

ನೆರಿಕೆದ್ ಗೋಡೆ । ಮಣ್ಣ್‌ದ್ ಗೋಡೆ
ಇಟ್ಟಿಗೆ ಗೋಡೆ ಮನೆ ಗೋಡೆ ।೨।
ಕಂದ । ಈಗೀಗ ಕಟ್ಟಿವೆ ಕಲ್ಗೋಡೆ

ಹುಲ್ಲುದ್ ಮನೆಯಾತ್ । ಹಂಚಿದ್ ಮನೆಯಾತ್
ಹುಲ್ಲುದ್ ಹಂಚಿದ್ ಮನೆ ಹೋತು ೨।
ಕಂದ । ಈಗೆಲ್ಲ ಸಿಮೆಂಟ್‌ದ್ ಮನೆ ಬಾತ್

ಮಣ್ಣ್‌ದ್ ನೆಲ ಆತ್ । ಸಿಮೆಂಟ್ ನೆಲ ಆತ್
ಮಣ್ಣ್‌ದ್ ಸಿಮೆಂಟ್‌ದ್ ನೆಲ ಹೋತು ೨।
ಕಂದ । ಹಂಚಿದ್ ನೆಲ ಬಾತ್

ಸೌದೆದ್ ಒಲೆ ಹೋತು । ಗ್ಯಾಸ್‌ದ್ ಒಲೆ ಬಾತ್
ಬೆಸಗೆಂತು ಇಲ್ಲದೆ ಹಾಳಾತ್ ೨।
ಕಂದ । ಅಟ್ಟದ ಮರ ಪೂರ ಕುಂಬಾತ್

ಟ್ರಿಣ್ ಟ್ರಿಣ್ ಟ್ರಿಣ್ ಟ್ರಿಣ್ । ಟ್ರಿಣ್ ಟ್ರಿಣ್ ಟ್ರಿಣ್ ಟ್ರಿಣ್
ಇದ್ದಲ್ಲೆ ಇತ್ತ್ ಟೆಲಿಫೋನ್ ೨।
ಕಂದ । ಸ್ಥಿರ ಫೋನ್ ಕಾಲ ಕಳಿತುಟ್ಟು

ಮಣ್ಣ್‌ನ ಮಡ್ಕೆ । ಮಣ್ಣ್‌ನ ಚೆಟ್ಟಿ
ಅನ್ನ ಗೈಪಿಗೆ ಬೇಕಿತ್ತ್ ೨।
ಕಂದ । ಊಟಂತೂ ಬಾರಿ ರುಚಿಯಿತ್ತ್

ಸೌದೆದ್ ಒಲೆ ಇಲ್ಲೆ । ಕೆಂಡದ ಹಿಟ್ಟಿಲ್ಲೆ
ಒಲೆ ಮುಂದ್ ಕಥೆ ಹೇಳವ್ ಯಾರಿಲ್ಲೆ ೨।
ಕಂದ । ಒಲೆ ಮುಂದೆ ಕೂರಿಕೆ ಒಲೆಯಿಲ್ಲೆ

ಮಜ್ಜಿಗೆ ಮೇಲೆ । ತೇಲ್ತಿತ್ತ್ ಬೆಣ್ಣೆ
ಬಿಸಿ ಅನ್ನಕ್ಕೆ ಬೆಣ್ಣೆ ಬೇಕಿತ್ತ್ ೨।
ಕಂದ । ಉಂಬಕ್ಕೆ ಅನ್ನ ರುಚಿಯಿತ್ತ್

ಅರಮನೆ ನೆರೆಮನೆ । ಕರೆಮನೆ ಹೊರಮನೆ
ಎಲ್ಲಕ್ಕೂ ಹೆಚ್ಚ್ ಗುರುಮನೆ ॥೨॥
ಕಂದ । ಆ ಮನೆ ಈ ಮನೆ ಸುಮ್ಮನೆ

ನೆರೆ ಮನೆ ಕರೆ ಮನೆ । ಊರಿಗೆ ನಡುಮನೆ
ಕೂಡಿ ಬಾಳೊಕು ಮನೆ ಮನೆ ॥೨॥
ಕಂದ । ಯಾರಿಗೂ ಬೇಡ ತಲೆ ಬೇನೆ

ಹತ್ಯಾರ್ ಇದ್ದಂಗೆ । ಅಚ್ಚ್‌ಕಟ್ಟ್ ಕೆಲ್ಸ
ಬಡ್ಡ್ ಹಿಡ್ದದ್ ಬಂಡಾಟ ॥೨॥
ಕಂದ । ಕಾಟಾಚಾರದ ಕೆಲ್ಸ ಕೆಟ್ಹೋದೆ

ಕರಿ ಕೆಸ ದಂಟುಟ್ಟು । ಬಾಳೆದ್ ದಿಂಡುಟ್ಟು
ಬಾಳೆದ್ ಕೂಂಬೆನು ಬೇಕಾದೆ ॥೨॥
ಕಂದ । ರೈತಂದ್ ಯಾಗೊಳು ಗೋಳಾಟ

ಕಾಡಾನೆ ಬಂದುಟ್ಟು । ತೋಟಕ್ಕೆ ನುಗ್ಗಿಟ್ಟು
ತೋಟನ ದೊಂಸ ಮಾಡಿಟ್ಟು ॥೨॥
ಕಂದ । ರೈತಂದ್ ಯಾಗೊಳು ನರಳಾಟ

ಕೋಳಿಗೆ ಗೂಡಾಕು । ದನಕ್ಕೆ ಹಟ್ಯಾಕು
ಲಾಯನೆ ಆಕು ಕುದ್ರೆಗೆ ॥೨॥
ಕಂದ । ಬೆಚ್ಚಂಗೆ ಮನೆಬೇಕ್ ಮನ್ಸಂಗೆ

ಚಂದ್ರಂಗೂ ಕೊಡೆ ಉಟ್ಟು । ಸೂರ್ಯಂಗೂ ಕೊಡೆಯುಟ್ಟು
ಚಂದ್ರ ಸೂರ್ಯಂಗೂ ಕೊಡೆಯುಟ್ಟು ॥೨॥
ಕಂದ । ಪ್ರಕೃತಿ ಮಾಯೆದ್ ದೊಡ್ಡಾಟ

ಸೂರ್ಯ ಕಂತಿಕಾತ್ । ಬಾಗ್ಲ್ ಮುಚ್ಚಿಕಾತ್
ಮನೆ ಗುಡ್ಸುವ ಹೊತ್ತ್ ಕಳ್ದೋತ್ ।೨।
ಕಂದ । ದೀಪ ಹೋಸುವ ಹೊತ್ತ್ ಬಂದಾತ್

ಯಾಲಕ್ಕಿ ತಾಳ್ । ಕಪಿಗಳ ಪಾಲ್
ಯಾಲಕ್ಕಿ ಕಾಳ್ ಎಲಿಗಳ ಪಾಲ್ ।೨।
ಕಂದ । ಒಳ್ದರೆ ಉಟ್ಟು ನಾವ್ಗೆಲ್ಲ ಪಾಲ್

ಕುಡಿ ಹಾರಿ ಬಂದುಟ್ಟು । ಕೊಂಬೆಲಿ ಕುದ್ದುಟ್ಟು
ಹೆಜ್ಜೇನ್ ಕೂರುದು ಮಾಮೂಲು ।೨।
ಕಂದ । ಜೇನ್ ಇದ್ದಷ್ಟ್ ಫಸಲುಟ್ಟು

ಮಡಿಕೆಗೂ ಕೂಡಿವೆ । ಪೆಟ್ಟಿಗೆಗೂ ಕೂಡಿವೆ
ಪೋಟೆ ಹುತ್ತಲೂ ಇದ್ದವೆ ತುಡುವೆಗ ।೨।
ಕಂದ । ಮಜೆಂಟಿ ಕೂಡ್‌ದೆ ಮೂಲೆಗೆ

ಗೇರ್‌ದ್ ಮರ ಉಟ್ಟು । ಮರ ತುಂಬ ಹಣ್ಣುಟ್ಟು
ಹಣ್ಣಿಗೆ ಬೀಜ ಒಳಗಿಲ್ಲೆ ।೨।
ಕಂದ । ಸೃಷ್ಟಿ ನಿಯಮ ಹಂಗುಟ್ಟು

ಬೇಸಗೆಲಿ ಬಿರ್‌ಬಿಸ್‌ಲ್ । ಮಳೆಗಾಲಲಿ ಜಡಿಮಳೆ
ಸಳಿಗಾಲಲಿ ಸಳಿ ತಡೆಕಾದುಲೆ ।೨।
ಕಂದ । ಕಾಲ ಕಾಲಕೆ ಬಾದೆಲ್ಲ ಬಾಕಲ್ಲ ?

ದೂರುದು ಬೇಡ । ದೂಷಣೆ ಬೇಡ
ನಿನ್ನ ಪಾಡಿಗೆ ನೀನಿರ್ ।೨।
ಕಂದ । ನಾಯಿ ಬೊಗಳಿರೆ ಬೊಗಳಾಲಿ

ಒಲೆ ತಿಂಟೆ ಮೇಲೆ । ಕುದ್ದುಟ್ಟು ಕೊತ್ತಿ
ಬೆಚ್ಚಂಗೆ ಊಟ ಉಂಡಾತ್ ।ಽ।
ಕಂದ । ಕೊತ್ತಿಗೆ ಬೇಟೆ ಮರ್ರೋತ್

ಹಾಲ್ ಅಳಗೆ ಮೇಲೆ । ಕಣ್ಣುಟ್ಟು ಕೊತ್ತಿಗೆ
ಹೋಕಿಲೆ ಆಚೀಚೆ ಎಲ್ಲಿಗೂ ।ಽ।
ಕಂದ । ಸೊಂಬೇರಿಯಾದರೆ ಬರಿ ನಷ್ಟ

ಕೊತ್ತಿಗ ಮನೆಯೊಳಗೆ । ನಾಯಿಗ ಮನೆ ಹೊರಗೆ
ಮಕ್ಕ ಆಡಿವೆ ಒಳ ಹೊರಗೆ ।ಽ।
ಕಂದ । ಆಡೊಕು ಮಕ್ಕ ಹಂಗೆನೆ

ಅಂಗಳ ತುಂಬ । ಕೊಣ್ದವೆ ಕರ್‌ಗ
ಕರ್‌ಗಳ ಹಿಂದೆ ನಿಲ್ಲ್‌ಬೇಡ ।ಽ।
ಕಂದ । ಒದ್ದ್ ಓಡಿವೆ ಎಚ್ಚರ

ಹಕ್ಕಿಗ ಎದ್ದವೆ । ಚಿಲಿಪಿಲಿತ್ತೇಳಿವೆ
ಸೂರ್ಯಂಗೆ ಸ್ವಾಗತ ಹಾಡಿವೆ ।ಽ।
ಕಂದ । ಅನ್ನದ ದಾರಿನ ಹುಡ್ಕಿವೆ

ಜೇನ್ದುಂಬಿ ಹಾರಿವೆ । ಮಕರಂದ ಹೀರಿವೆ
ಗೂಡಿಗೆ ಬಂದ್ ಕಕ್ಕಿವೆ ।ಽ।
ಕಂದ । ಸುಮ್ಮನೆ ಕೂರದೆ ಹಾರಿವೆ

ಉಂಬಕೆ ಮುಂದೆ । ಹಲ್ಸ್‌ನ ಹಣ್ಣ್
ಉಂಡಾದ ಮೇಲೆ ಮಾವುನ ಹಣ್ಣ್ ।ಽ।
ಕಂದ । ವಿಷ ಆದೆ ಯಾಗೊಳು ಕರ್‌ಗ್‌ಲ್ ಹಣ್ಣ್

ತಿಂದಾತ್ ಕುಡ್ದಾತ್ । ನಲ್ವತ್ತಕ್ಕೆಲ್ಲಾತ್
ತಾಕತ್ತ್‌ನ ವಯ್ಸ್ ದಾಟ್ಯೋತ್ ।೨।
ಕಂದ । ಬದ್ಕ್‌ನ ಅರ್ಧ ಕಳ್ದೋತ್

ಹಸಿ ಮದ್ದ್ ಅರಿಯೊಕು । ಹಸಿ ಮದ್ದ್ ಕುಡಿಯೊಕು
ಹಳ್ಳಿದ್ ಮದ್ದ್ ಹಸಿಮದ್ದ್ ।೨।
ಕಂದ । ಮನೆ ಕರೆಲಿರ್ದು ಹಸಿ ಮದ್ದ್

ಇಕ್ಕಿದ್ ಉಂಡಾತ್ । ಸಂಬಂಧ ತುಂಡಾತ್
ಮನ್ಸನ ಹಣೆ ಬರ ಗೊತ್ತಾತ್ ।೨।
ಕಂದ । ನಿಯತ್ತಿಗೆ ನಾಯಿ ಹೆಸ್ರಾತ್

ದನಗಳ ಕೊಟ್ಟೊ । ನಾಯಿ ಕೊತ್ತಿನೂ ಕೊಟ್ಟೊ
ಗುರ್ತಿಡ್ದ್ ಬಂದೊ ಹಿಂದಕ್ಕೆ ।೨।
ಕಂದ । ಮನ್ಸಂಗೆ ದಾರಿ ತಪ್ಪ್ಯೋದೆ

ಹೊತ್ತಿಗೆ ಸರಿಯಾಗಿ । ಕೂಂಗಿದೆ ಕೋಳಿ
ಹೊತ್ತಿಗೆ ಗೂಡ್ ಸೇರ್‌ದೆ ಹಕ್ಕಿ ।೨।
ಕಂದ । ಮನ್ಸಂಗೆ ಹೊತ್ತ್ ತಪ್ಪ್ಯೋದೆ

ಕಂಡದ್ ಕೆಂಡಾದೆ । ಗಡ ಸುದ್ದಿ ಕೇಳ್ಬೇಡ
ಪರಂಗಿ ಯಾಗೊಳು ಕೆರ್ದಾದೆ ।೨।
ಕಂದ । ಹುಚ್ಚು ಯಾಗೊಳು ಕಚ್ಚಿದೆ

ಹಣ್ಣ್ ಕೊಯ್ದವೆ । ಕೊಯ್ದರ ತಿಂದವೆ
ತೇಗಿದ ಮೇಲೆ ತಿರಿಗೀವೆ ।೨।
ಕಂದ । ಬುಡಕ್ಕೇ ಮಡ್ಗೀವೆ ಗರಗಸ

ಪಟ್ಟೆ ಪಟ್ಟೆ ಹುಲಿ ಕಡಂದಿ । ನೋಡಿಕೆ ಪೊರ್ಲು
ಪೆಟ್ಟಾದರೆ ಸಿಟ್ಟಾಗಿ ಬಂದವೆ ಹಾರಿ ।೨।
ಕಂದ । ಒಂದೆರಡ್ ಕಚ್ಚಿರೆ ಹರ ಹರ

ಗುಮ್ಮ ಮೆಟ್ಟಿಟ್ಟು । ಹೆಜ್ಜೇನ್ ಎದ್ದುಟ್ಟು
ದಾರೀಲಿ ಹೋಗವುಕೆ ಕಚ್ಚಿಟ್ಟು ।೨।
ಕಂದ । ಕಷ್ಟ ಬಾದು ಹಿಂಗೆ ಪರರ್‌ಂದ

ಗೆದ್ದಲ್ ಹುಳಕೆ । ರೆಕ್ಕೆ ಬಂದದೆ
ಹಾರಿರೆ ಹಾರ್‌ದೆ ಕ್ಷಣ ಹೊತ್ತ್ ।೨।
ಕಂದ । ಸಿರಿತನತ್ತೇಳುದು ಅರೆ ಹೊತ್ತ್

ಹುತ್ತ ಕಟ್ಟಿದ್ದ್ ಯಾರೊ । ಮಾಳಿ ಕೊರ್ದದ್ ಯಾರೊ
ವಾಸಕ್ಕೆ ಬಂದದ್ ಇನ್ಯಾರೊ ।೨।
ಕಂದ । ದುಡ್ಡವಂಗೆ ಯಾಗೊಳು ಬರೀ ಸೋಲು

ಮಳೆಗಾಲ ಸಳಿಗಾಲ । ಅರೆಗಾಲ
ಇದ್ದವುಕೆ ಒಳ್ಳೆದ್ ಮಳೆಗಾಲ ।೨।
ಕಂದ । ಯಾರಿಗೂ ಬೇಡ ಬರಗಾಲ

ಉಪಕಾರ ಪಡ್ಕಂಡ್ । ಮರ್‍ತೋದೆ
ಕಾಂಬಕನ ಮೊಕ ತಿರ್‌ಗ್ಸ್ಯೋದೆ ।೨।
ಕಂದ । ನಾಯಿಗೂ ಕಡೆ ಆದೆ ನರ ಜಲ್ಮ

ಕಾಲ ಕೆಟ್ಟಿತ್ತ್‌ಲೆ । ದಿಕ್ಕ್ ತಪ್ಪಿತ್ತ್‌ಲೆ
ವ್ಯವಸ್ಥೆ ಮಾತ್ರ ಕೆಟ್ಟಂಗಾಗುಟು ।೨।
ಕಂದ । ಕಾಲ ಬಂದಂಗೆ ಕಟ್ಟೋಕು ಕೋಲ

ವಿಶ್ವಾಸ ಬೆಳ್ಸೊಕು । ವಿಶ್ವಾಸ ಉಳ್ಸೊಕು
ವಿಶ್ವಾಸಂದ ಬದ್ಕ್ ದೂಡೊಕು ।ಎ।
ಕಂದ । ವಿಶ್ವಾಸ ಹೋದರೆ ಹಾಳಾದೆ ಬದ್ಕ್ ಹೋಳಾದೆ

ಮಜ್ಜಿಗೆ ಕಡೆಕನ । ದರುಬುರು ಸದ್ದ್
ಪಜ್ಜಿ ಕಡೆಕನ ಗಡಗಡ ಸದ್ದ್ ।ಎ।
ಕಂದ । ಇಂದೆಲ್ಲ ಕೇಳ್ದು ಮಿಕ್ಸಿದೇ ಸದ್ದ್

ಬೆಣ್ಣೆಗಾರ್ತಿ ಸೊಪ್ಪು । ತಲೆಗೆಲ್ಲ ತಂಪು
ಬೆಂದ ಸೊಪ್ಪುನ ನೆತ್ತಿಗೆ ಮೆತ್ತಿರೆ ।ಎ।
ಕಂದ । ಬಂದಾದೆ ಕೂದೊಲು ಸೊಂಪಾಗಿ

ಸಿಟ್ಟ್‌ನ ಬುಟ್ಟರೆ । ಸುಡ್ದುಲೆ ಯಾವುದು
ಸಿಟ್ಟ್‌ಲೆ ಎಲ್ಲ ಸುಟ್ಟೋದೆ ।ಎ।
ಕಂದ । ಕೊಯ್ದು ಮೂಗು ಚಿಗ್‌ರ್‌ದ್‌ಲೆ

ಹಿಡಿಕಡಿ ತಿಂದರೆ । ಆಕಿಲೆ ಹೊಟ್ಟೆಗೆ
ಕಟ್ರೆ ಆದೆ ಸಂಶಯ ಇಲ್ಲೆ ।ಎ।
ಕಂದ । ಅಗ್‌ದ್ ನುಂಗಿರೆ ಆರೋಗ್ಯ

ಉಂಬಕನ ಕುಡೆಕನ । ನೆಮ್ಮದಿ ಇರ್‌ಲಿ
ದುಡಿಯೊದು ಎಲ್ಲವ್ ಅದ್ಕಾಗಿ ।ಎ।
ಕಂದ । ನೆಮ್ಮದಿನ ಎಲ್ಲೂ ಮಾರುದುಲೆ

ಕಣ್ಣೀರ್ ಹಾಕಂಡ್ । ಉಂಬೊಕೆ ಬತ್ತ್
ಅರ್ಥ ಇಲ್ಲದ ಬದ್ಕ್ ಆಗೋದೆ ।ಎ।
ಕಂದ । ನಾಕ್ ದಿನದ ಬಾಳ್ ಹಾಳಾದೆ

ದಿನದಿನದ ಬೆಳ್ಕ್ । ಹೊಸದಾಗಿ ಕಂಡದೆ
ಹೊಸ ಬೆಳ್ಕ್ ನಮಿಗೆ ಸೌಭಾಗ್ಯ ।ಎ।
ಕಂದ । ಹೊಸ ಬೆಳ್ಕ್ ನಮಿಗೆ ಹೊಸ ಬದ್ಕ್

ಎದ್ದಂಗೆ ನೀನ್ । ಶೌಚಕ್ಕೆ ಹೋಕು
ಅರೋಗ್ಯದ ಗುಟ್ಟು ಅಲ್ಯುಟ್ಟು ।ಎ।
ಕಂದ । ಆರೋಗ್ಯ ಬುಟ್ಟರೆ ಯಾವ್ದುಟ್ಟು?

ಹಲ್ಲುಜ್ಜಿ ಮೊಕ ತೊಳ್ದ್ । ತಿಂಬಕೆ ಮುಂದೆ
ನೀರಷ್ಟೆ ಕುಡ್ದರೆ ಆರೋಗ್ಯ ।ಎ।
ಕಂದ । ಹಿರಿಯರ ಮಾತ್ ಮಾಣಿಕ್ಯ

ಅಲ್ಲಿಲ್ಲೆ ಇಲ್ಲಿಲ್ಲೆ । ಎಲ್ಲೆಲ್ಲೂ ಇಲ್ಲೆ
ಎಲ್ಲನೂ ಉಟ್ಟು ಇದ್ದಲ್ಲೆ ।ಎ।
ಕಂದ । ಹುಡುಕುವ ಕಣ್ಣ್ ನಮ್ಮದಾಕು

ನೂಕುವಲ್ಲಿ ನೂಕೋಕು । ಹಾಕ್ವಲ್ಲಿ ಹಾಕೊಕು
ಎಲ್ಲೆಲ್ಲೊ ಹಾಕುದು ಶಿಸ್ತಲ್ಲ ।ಎ।
ಕಂದ । ಸೊರಿವಲ್ಲೆ ಸೊರಿಯೊಕು ಕಸನೆಲ್ಲ

ಹಾಕ್‌ಬೇಡ ಕಿಚ್ಚ್‌ಗೆ । ಪ್ಲಾಸ್ಟಿಕ್ ಮುದ್ದೆ
ಎದ್ದದೆ ಗಾಳಿಲಿ ವಿಷ ಹೊಗೆ ।ಎ।
ಕಂದ । ಪರಿಸರ ಹಾಳಾದೆ ನಮ್ಮಂದ

ಪ್ಲಾಸ್ಟಿಕ್ ತರ್‌ಬೇಡ । ಪ್ಲಾಸ್ಟಿಕ್ ಹರ್‌ಂಡ್ ಬೇಡ
ಮಣ್ಣೆಲ್ಲಾ ಆದೆ ರಸಹೀನ ।ಎ।
ಕಂದ । ಪರಿಸರ ಕಾಪಾಡ್ದು ಕರ್ತವ್ಯ

ಆಳಕ್ಕೆ ಊಡಿರೆ । ಆಳೆತ್ತರ ಬೆಳ್ದದೆ
ರೈತಂಗೆ ಗೊತ್ತುಟ್ಟು ಬೆಳೆ ಗುಟ್ಟು ।।೨।।
ಕಂದ । ರೈತಂಗೆ ಕೈ ಮುಗಿಯೊಕು

ಸಿರಿತನ ಬಂದದೆ । ಎದೆ ಮೆಟ್ಟಿ ನಿತ್ತದೆ
ಹೊತ್ತ್ ಇಳ್ದಂಗೆ ಇಳ್ದೋದೆ ।।೨।।
ಕಂದ । ಸಿರಿತನ ಇರಿಕಿಲೆ ಕಡೆ ಮುಟ್ಟ

ಮನ್ಸ್ ಬಂದಂಗೆ । ಬೆಳೆ ಬೆಳಿಯಕೆ ಆದುಲೆ
ಮಣ್ಣಿಗೆ ಒಗ್ಗುವ ಬೆಳೆ ಆಕು ।।೨।।
ಕಂದ । ಮಣ್ಣಿಗೆ ತಕ್ಕಂಗೆ ಬೆಳ್ದಂವ ಜಾಣಾದೆ

ನಗರದ ಶೋಕಿ । ನಗರಕ್ಕೆ ಇರ್‌ಲಿ
ನಗರದ ಬೇರಿರ್ದು ಹಳ್ಳೀಲಿ ।।೨।।
ಕಂದ । ಹಳ್ಳಿ ಇದ್ದರೆ ಉಟ್ಟು ನಗರೆಲ್ಲಾ

ಹಳ್ಳೀಲಿ ಹೊಳೆ ಉಟ್ಟು । ಹಳ್ಳೀಲಿ ಬೆಳೆಯುಟ್ಟು
ಹಳ್ಳೀಲಿ ಉಟ್ಟು ಶುಚಿಗಾಳಿ ।।೨।।
ಕಂದ । ಹಳ್ಳೀನೆ ಮೇಲು ಎಲ್ಲಕ್ಕು

ಸೋಂಬೇರಿ ಆಗ್‌ಬೇಡ । ಸೊಕ್ಕೇರಿ ನಡಿಬೇಡ
ನಾಕಾರ್ ಜನಕೆ ನೀ ಆಕು ।।೨।।
ಕಂದ । ಇದ್ದಲ್ಲೇ ಕಾಂಬೊಕು ಕೈಲಾಸ

ಕಲ್ಲಾಯುಷನ ಯಾರೂ । ಪಡ್ಕಂಡ್ ಬಾತ್‌ಲೆ
ಹತ್ತಾರ್ ನಾಡ್‌ಲಿ ನಲ್ದಾಡ್ ।।೨।।
ಕಂದ । ಸಾಧಿಸಿದವಂಗೆ ಸಾವಿಲ್ಲೆ

ಹಳ್ಳಿ ಬಚ್ಚಿರೆ ದಿಲ್ಲಿ ನಡ್ಗಿದೆ
ಹಳ್ಳೀಲೆ ಇರ್ದು ಸಾರಸತ್ವ   ಲಿ।
ಕಂದ । ಹಳ್ಳಿ ಪುಷ್ಟಿಂದ ಇರೊಕು ಯಾಗೊಳು

ಊರಿಗೆ ಕೊಡೆ । ಹಿಡೆಕೆ ಆದುಲೆ
ಬೆಟ್ಟಕ್ಕೆ ಕಂಬುಳಿ ಬೇಕಿಲ್ಲೆ  ಲಿ।
ಕಂದ । ಊರು ಉಪಕಾರ ಮರ್ತದೆ.

ಅಂಗಾಂಗ ಸೃಷ್ಟಿ । ಐದಿದ್ದರೆ ಮುಷ್ಠಿ
ಊನ ಆದರೆ ಬದ್ಕ್ ತಟಪಟ  ಲಿ।
ಕಂದ । ನರಜಲ್ಮ ಸಿಕ್ಕ್ಯುಟ್ಟು ನಮ ಪುಣ್ಯ

ವಾರಕ್ಕೆ ಏಳ್ । ತಿಂಗಕ್ಕೆ ಮೂವತ್ತು
ಮುನ್ನೂರರವತ್ತರ ಮೇಲೆ ಐದುಟ್ಟು   ಲಿ।
ಕಂದ । ನೂರೊರ್ಸದ ಆಯುಷ ಎಲ್ಲ್ಯುಟ್ಟು ?

ಆನೆದ್ ದಾರಿ । ಆನೆಗೆ ಗೊತ್ತುಟು
ಕಂಡ ಕಂಡ ನಾಯಿಗ ಬೊಗ್ಳೀವೆ   ಲಿ।
ಕಂದ । ನಾಯಿಗಳ ಬಾಯಿಗೆ ಬರಿ ಸೋಲು

ಕಾಡ್ಕೋಳಿಗೆ ಕಾಪು । ಕಟ್ಟುವ್ ಇಲ್ಲೆ
ಸಂಕ್ರಮಣನೂ ಇಲ್ಲೆ ಉಗಾದಿನೂ ಇಲ್ಲೆ   ಲಿ।
ಕಂದ । ನರ ಮಾಡಿರೆ ಉಟ್ಟು ಯಾಗೊಳು ಹಬ್ಬ

ಕೇರ್‌ದೆ ಕೋಳಿ । ಕತ್ತಾಲೆ ಮುಟ್ಟ
ಎಷ್ಟಾದರೂ ಅಷ್ಟೇ ಹೊಟ್ಟೆ ಅಡಿಗೆ  ಲಿ।
ಕಂದ । ಕೆಲವರ ಕೆಲ್ಸ ಬರಿ ವ್ಯರ್ಥ

ಆನೆಗೆ ಸಿಂಹ । ಸರ್ಪಕ್ಕೆ ಗರುಡ
ಮನ್ಸಂಗೆ ಮನ್ಸನೆ ಶತ್ರುವಾದೆ ।ರಿ।
ಕಂದ । ಮನ್ಸಂಗೆ ಬುದ್ಧಿ ಬಾದ್ಯಾಗ ?

ಹಾಲ್ ಹಲ್ಲ್ ಉದ್ರಿದೆ । ಹೊಸ ಹಲ್ಲ್ ಹುಟ್ಟಿದೆ
ಮರಿ ಹಲ್ಲ್ ಮೂಡುದು ಕಾಂಬೊಕು ।ರಿ।
ಕಂದ । ಹಲ್ಲ್‌ನ ಬಗ್ಗೆ ನಿಗಬೇಕ್

ಹುಳ್ಕಲ್ಲ್ ಇದ್ದವ್ । ಹಿಡಿಕಡಿ ನುಂಗಿವೆ
ಬಾಯಿಗೆ ಹಲ್ಲ್ ಪೋಣ್ಸಿದ ಮುತ್ತು ।ರಿ।
ಕಂದ । ನಿಗ ಇಲ್ಲರೆ ಆದೆ ಬಾಯಿ ಬೊಚ್ಚು

ಆ ಪಾದ ಈ ಪಾದ । ಗರುಪಾದ
ನಿತ್ಯ ಗ್ಯಾನದ ಪಾದ ಹಿರಿಪಾದ ।ರಿ।
ಕಂದ । ಅಪ್ಪ ಅವ್ವನ ಪಾದ ಸಿರಿ ಪಾದ

ಕುದ್ದಲ್ಲೆ ಕೂರ್‌ಬೇಡ । ನಿತ್ತಲ್ಲೆ ನಿಲ್ಲ್‌ಬೇಡ
ಕೈಲಾದ ಕೆಲ್ಸ್ ನೀ ಮಾಡ್ ।ರಿ।
ಕಂದ । ದೂಷಣೆ ನಿನ್ನಂದ ದೂರಾದೆ

ಬಡ ಬಡತ್ತೇಳಿರೆ । ಸಿರಿತನ ಬಾದುಲೆ
ಖಾಲಿ ಮಡ್ಕೆದ್ ಬರಿಸದ್ದ್ ।ರಿ।
ಕಂದ । ಬರಿ ಕೈ ಅಳ್ತೆ ವ್ಯರ್ಥಾದೆ

ಕೊಟ್ಟವ್ ಆಡ್ದುಲೆ । ಕೊಡದವರ್ದೇ ರಂಪ
ಲೊಟ್ಟೆ ಬುಟ್ಟವೆ ನೂರೆಂಟ್ ।ರಿ।
ಕಂದ । ಲೋಕಕೆ ಗೊತ್ತುಟ್ಟು ಈ ಗುಟ್ಟು

ಸಾಲಕ್ಕೆ ಬಡ್ಡಿ । ಬಡ್ಡಿಗೆ ಸಾಲ
ಮುರ್ದೋತ್ ಅಂದಿಗೆ ವಿಶ್ವಾಸ ೨।
ಕಂದ । ಸಾಲ ಎಂದಿಗೂ ಸೋಲಾದೆ

ಕೊಟ್ಟಂವ ಕೋಡಂಗಿ ತಕಂಡಂವ ಶೂರ
ಎದ್ರಾಗಿ ಕೇಳ್ದೆ ನೀ ಯಾರ್ ? ೨।
ಕಂದ । ವಸೂಲಾಗದೆ ಸೋತರೆ ಸುಮ್ಮನಾಗ್

ನೀತಿಗೆ ಬೆಲೆಯುಟ್ಟು । ನಿಯಮಕ್ಕೆ ಬೆಲೆಯುಟ್ಟು
ನೀತಿ ನಿಯಮನ ಮುರಿಬೇಡ ೨।
ಕಂದ । ಉದಾಸಿನ ಎಂದಿಗೂ ಮಾಡ್ಬೇಡ

ಹುಟ್ಟಕನೆ ಇದ್ದದೆ । ಹುಳುದು ಬಾಯಿಲೆ ರೇಶಿಮೆ
ಮನೆ ಮಾಡಿ ಮಲ್ಗಿದೆ ಮನೆಯೊಳಗೆ ೨।
ಕಂದ । ನರನ ಸ್ವಾರ್ಥಂದ ಸತ್ತೋದೆ

ಜೋಳದ ಸಾಲುಟ್ಟು । ರಾಗಿನೂ ಬೆಳ್ದುಟ್ಟು
ಹೊಲ ಪೂರ ಹಸ್ರ್ ಹೊದ್ದುಟ್ಟು ೨।
ಕಂದ । ವರ್ಷದ ಅನ್ನ ಅಲ್ಯುಟ್ಟು

ಬತ್ತದ ಬೆಳೆಯುಟ್ಟು । ಕದ್ರೆಲ್ಲ ಬಾಂಗಿಟ್ಟು
ಹುತ್ತೇರಿ ಹಬ್ಬ ಬಂದುಟ್ಟು ೨।
ಕಂದ । ಕೊಡ್‌ಗ್‌ಗೆ ಸುಗ್ಗಿ ಈ ಹಬ್ಬ

ವರುಷದ ಹಬ್ಬ । ವರುಷ ವರುಷಾದ ಹಬ್ಬ
ವರುಷಕ್ಕೆ ಒಂದೇ ನಾಡ್‌ನ ಹಬ್ಬ ೨।
ಕಂದ । ಹೊಸ ಕುಪ್ಪ ನಿಂಗೆ ತಾಕುಟ್ಟು

ಬೇವ್ ಬೆಲ್ಲದ ಹಬ್ಬ । ಉಗಾದಿ ಹಬ್ಬ
ಹೋಳಿಗೆ ಪಾಯಸ ರಸ ಊಟ ।ನಿ।
ಕಂದ । ಎಲ್ಲವ್‌ಕೂ ಸಿಕ್ಕಲಿ ಸಿಂಹಿ ಊಟ

ಮರಗಿಡ ಚಿಗ್‌ರಿದೆ । ಹೂ ಜೊಂಪೆ ಜೂಂಗಿದೆ
ಮರ ತುಂಬ ಫಸಲ್ ಕೋಸಿದೆ ।ನಿ।
ಕಂದ । ವಸಂತ ಕಾಲ ಕುಸಿಯಾದೆ

ಎತ್ತ್‌ಗಳ ಮೀಸಿವೆ । ಗೋ ಪೂಜೆ ಮಾಡಿವೆ
ಹರ ಹರತ್ತೇಳ್ಕಂಡ್ ಊಡಿವೆ ।ನಿ।
ಕಂದ । ರೈತನೆ ದೇಶದ ಶ್ರಮಜೀವಿ

ಬೆಟ್ಟಲಿ ಕರಿಕಲ್ಲ್ । ಬಯ್‌ಲ್‌ಲಿ ಕರಿ ಕಲ್ಲ್
ಬೆಟ್ಟ ಬಯ್‌ಲ್‌ಲಿ ಕರಿಕಲ್ಲ್ ।ನಿ।
ಕಂದ । ಬೆಟ್ಟಲಿ ಒಂದುಟ್ಟು ಕಾಳಿಂಗ

ನಮ್ಮೂರ್ ಅವ್ರೂರ್ । ನಾವಿರುವ ನಮ್ಮೂರ್
ಎಲ್ಲಕ್ಕೂ ಪೊರ್ಲುಳ ನಮ್ಮೂರ್ ।ನಿ।
ಕಂದ । ಹಸ್ರುಟ್ಟ ಊರೇ ನಮ್ಮೂರ್

ಬೆಟ್ಟದ ಸಾಲುಟ್ಟು । ಗದ್ದೆ ಬಯ್ಲುಟ್ಟು
ನಡ್‌ಲೊಂದ್ ತೋಡು ಹರಿತುಟ್ಟು ।ನಿ।
ಕಂದ । ಅಡಿಕೆ ಪೋಯಿ ನಾವೆಲ್ಲ

ನೋಡಿಕೆ ಬೆಳಿ ಮೋಡ । ಭೂಮಿಗೆ ಕರಿಮೋಡ
ಮಳೆ ಸುರೆಕೆ ಬೇಕ್ ಕರಿ ಮೋಡ ।ನಿ।
ಕಂದ । ಕರಿ ಕಪ್ಪುತ್ತೇಳಿ ಜರಿಬೇಡ

ಮಳೆ ಹಕ್ಕಿ ಭೂಮಿನ । ಮುಟ್ಟಿ ಹಾರ್‌ತುಟ್ಟು
ಇಂದಲ್ಲ ನಾಳೆ ಮಳೆ ಬಾದು ।೨।
ಕಂದ । ಮಳೆ ಹಕ್ಕಿಗೆ ಗೊತ್ತುಟ್ಟು ಈ ಗುಟ್ಟು

ಮಳೆ ಬಿದ್ದ ನೀರ್‌ಲಿ । ಮಳೆಗುಳ್ಳೆ ಎದ್ದರೆ
ಮಳೆ ಉಟ್ಟು ಹೆಚ್ಚ್‌ತ ಹೇಳೀವೆ ।೨।
ಕಂದ । ಹಿರಿಯರ ಅನುಭವಕೆ ಬೆಲೆಯುಟ್ಟು

ಫಳ ಫಳ ಮಿಂಚ್ । ಗುಡುಗುಡು ಗುಡುಗು
ಮುಂಗಾರ್ ಮಳೆ ಬಾಕಾತ್ ।೨।
ಕಂದ । ಹೊತ್ತಿಗೆ ಮುಂದೆ ಮನೆ ಸೇರ್

ಚುಕ್ಕಿನೂ ಇಲ್ಲೆ । ನೀಲಿನೂ ಇಲ್ಲೆ
ಬಾಣ ಮುಚ್ಚಿಟ್ಟು ಮೋಡಂದ ।೨।
ಕಂದ । ಹೊಡ್ದದೆ ಈಗ ಜಡಿ ಮಳೆ

ಆಲಿಕಾಯಿ ಬಿದ್ದುಟ್ಟು । ಅಂಗಳ ತುಂಬಿಟ್ಟು
ಹೆರ್ಕನೊ ಅದರ ಕೈ ತುಂಬ ।೨।
ಕಂದ । ತುಂಬನೊ ಅದರ ಸುಣ್ಣ ಗುಂಬ

ಆಲಿ ಕಾಯಿ ಬಿದ್ದ್ । ತರಕಾರಿ ಹೋತ್
ಸೋಂತೆ ಬೆಳ್ಳೆರಿ ಹಾಳಾತ್ ।೨।
ಕಂದ । ಬೆಳ್ದವರ ಬಾಳ್ ಗೋಳಾತ್

ರಂಗಾದ ರಂಗ್ । ಆಕಾಶಕ್ಕೆ ಪೊರ್ಲು
ಮಳೆ ಬಿಲ್ಲ್ ಕಂಡದೆ ನೋಡಲ್ಲಿ ।೨।
ಕಂದ । ಬಿಸ್ಲ್ ಮಳೆಗೆ ಅದ್ ಕೊಂಡಾಟ

ಗುಡುಗುಡು ಗುಡುಗಿದೆ । ಅಳುಂಬು ಎದ್ದದೆ
ಸುತ್ತಾಡಿರೆ । ಸಿಕ್ಕುದು ನಾಕಾಲ್ ।೨।
ಕಂದ । ಕಾಲಾಡಿ ಬಾ ನೀನ್ ಸುತ್ತೆಲ್ಲಾ

ಗೊರಗಾಕಿ ನಡೆತಿದ್ದೊ । ಬೆಚ್ಚಂಗೆ ಇರ್ತಿದ್ದೊ
ಬೆತ್ತದ ಹಿಡಿಕೊಡೆ ಹಿಡೆತಿದ್ದೊ ।೨।
ಕಂದ । ಸ್ವಿಚ್ಚ್‌ದ್ ಕೊಡೆ ಇಂದ್ ಬರಿ ಶೋಕಿ

ಎದ್ದದೆ ಗಡ ಭೂಮಿಲಿ ಜಲ । ಆರಿದ್ರಾ ಮಳೆದ್ ಭಾಷೆ ಗಡ
ಆದರೆ ಆಗಲಿ ಒಳ್ಳೆದ್ ಬೇಗ ।೨।
ಕಂದ । ಕುಡೆಕೆ ಬೇಕ್ ಜೀವ ಜಲ

ಸುರಾದ ಮಳೆ ಬುಡಾದೆ ಹೊಡ್ತ್ । ಗದ್ದೆ ತೋಡೆಲ್ಲ ಒಂದಾತ್
ಯಾಕಲ್ ಗದ್ದೆ ಒಡ ಹೋತ್ ।೨।
ಕಂದ । ಗುಂಡಿ ಗದ್ದೇಲಿ ಹೊಗಳಾತ್

ತಿಂಗಳ ಮುಟ್ಟ । ಸೊರ್ದುಟ್ಟು ಜಡಿ ಮಳೆ
ಸುತ್ತ ಮುತ್ತೆಲ್ಲ ಜಳಬಳ ।೨।
ಕಂದ । ಬೆಳೆ ಪೂರ ನೀರ್‌ಲಿ ಕರ್‌ಗ್ಯುಟ್ಟು

ಕಕ್ಕಡೆ ಎಸಂಡ್ । ಕರಿ ಎಸಂಡ್ ಸಿಕ್ಕುದು
ತೋಡುಲಿ ಕಲ್ಲ್ ಮೊಗ್‌ಚಿ ನೋಡೊಕು ।೨।
ಕಂದ । ಹಿಡ್ದರೆ ಹಿಡ್ಕಂಬದು ಎಚ್ಚರ

ಸುರು ಮಳೆಗೆ ಮೀನ್‌ಗ । ಹತ್ತೀವೆ ನೋಡು
ನಡು ಮಳೆಗೆ ಮೀನ್‌ಗ ಇಳ್ದವೆ ।೨।
ಕಂದ । ಕಡೆ ಮಳೆಗೆ ಕೊಯಿಲೆಗ ಕೊಣ್ದವೆ

ಚೆಯಿಂಪೆನೂ ಉಟ್ಟು । ಚೆರ್‌ಗ್‌ನೂ ಉಟ್ಟು
ಹತ್ತಿವೆ ಇಳ್ದವೆ ಮಿಶ್ರಾಗಿ ||2||
ಕಂದ । ಪೊಡದೊಳಗೆ ಬಿದ್ದವೆ ಜೊತೆಯಾಗಿ

ಕುಂಬೆ ಕಂಡಿಗೆ । ಪೊಡ ಇಸಿ ಬಂದೊಳೆ
ಬಿದ್ದಿರುವೊ ನೋಡು ಹೊಡಿ ಮೀನ್ ||2||
ಕಂದ । ಸೇರಸ್ಟ್ ಮೀನೊಟ್ಟಿಗೆ ಹಾವೂನು

ಮದ್ದ್ ಹೊಡ್ದವೆ । ಕೀಟಗ ಸತ್ತವೆ
ಗದ್ದೆಲಿ ಮೀನ್‌ಗ ನಾಪತ್ತೆ ||2||
ಕಂದ । ಗದ್ದೆಲಿ ಆಗಿದ್ದ ಹುರುಪು ಈಗಿಲ್ಲೆ

ಕೂಳಿನೂ ಇಲ್ಲೆ । ಗೋರಿನೂ ಇಲ್ಲೆ
ಪೊಡನೂ ಮೂಲೆಗೆ ಸೇರ್‍ಯೋತ್ ||2||
ಕಂದ । ಹಸಿ ಮೀನ್ ಹತ್ತಿಟು ತಲೆ ಮೇಲೆ

ಕಾವೇರಿ ತೀರ್ಥ । ತಲಕಾವೇರಿಲಿ ಉಕ್ಕಿದೆ
ಬೆತ್ತ್ ಕುತ್ತೋಕು ಗದ್ದೇಲಿ ||2||
ಕಂದ । ದೋಸೆ ಇಸೊಕು ಬೆತ್ತ್‌ಲಿ

ಬೀಸಿದೆ ಗಾಳಿ । ಹೊರ್‍ಟದೆ ಬೆಳ್ಕ್
ಹೊಟ್ಟಿದೆ ಗುಡುಗು ಜೋರಾಗಿ ||2||
ಕಂದ । ಮನ್ಸನಷ್ಟ್ ಚುರುಕು ಯಾವ್ದಿಲ್ಲೆ

ಅಷ್ಟುಟ್ಟು ಇಷ್ಟುಟ್ಟು । ಎಷ್ಟೆಷ್ಟೊ ಉಟ್ಟು
ಎಷ್ಟಿದ್ದರೆ ಅಷ್ಟೆ ನಾಯಿ ಹಾಲ್ ||2||
ಕಂದ । ನಾಯಿಗೆ ಮಾತ್ರ ಹಾಲುಟ್ಟು

ಚಿಗ್‌ರ್‌ದೆ ಗಿಡಮರ । ಚಿಗ್‌ರ್‌ದೆ ಗಿಡ ಬಳ್ಳಿ
ಚಿಗ್‌ರ್‌ದ್ ಅದರ ಶ್ರಮ ಶಕ್ತಿ ।೨।
ಕಂದ । ಹಣ್ಣಾದ ಎಲೆ ಪೂರ ಬಿದ್ದೋದೆ

ನೀರ್‌ಲಿ ಅಲೆಯುಟ್ಟು । ನೀರ್‌ಲಿ ಸುಳಿಯುಟ್ಟು
ನೀರ್‌ಲಿ ಶಾಖ ಅಡಂಗಿಟ್ಟು ।೨।
ಕಂದ । ನೀರ್‌ಲಿ ಲವಣ ಕರ್‌ಗ್ಯುಟ್ಟು

ಎಲ್ಲಿದೊ ಗಾಳಿ । ಎಲ್ಲದೊ ಮೋಡ
ಗಡಿಮೀರಿ ಸೊರ್ದದೆ ಮಳೆಯಾಗಿ ।೨।
ಕಂದ । ಮನ್ಸರ್ ಸತ್ತವೆ ಹೊಡ್ದಾಡಿ

ಕೊಳವೆಲಿ ನೀರ್ । ನಲ್ಲಿಲಿ ನೀರ್
ಮನೆಯೊಳಗೆ ನೀರ್ ಬರುತುಟ್ಟು ।೨।
ಕಂದ । ಪಾತಾಳದ ನೀರ್ ಪನ್ನೀರ್

ತರ ತರದ ಬಾಳೆಲಿ । ತರಾವರಿ ಗೊನೆಯುಟ್ಟು
ಬೀರಂಗೊಲೆ ಕಾಯಿ ಸುಕಯಿಲ್ಲೆ ।೨।
ಕಂದ । ಕಟ್ಟೆ ಬಾಳೆಗೆ ಗೊನೆಯಿಲ್ಲೆ

ಹಲ್ಸ್‌ನ ಹಣ್ಣ್ । ದನಗಳಿಗೆ ಪ್ರಾಣ
ದೊಂಡೆಲಿ ಗೂಂಜಿ ನಿತ್ತರೆ ನಿತ್ತೋದೆ ಪ್ರಾಣ ।೨।
ಕಂದ । ಎಚ್ಚರ ತಪ್ಪಿರೆ ಹೋದೆಲ್ಲ ಪ್ರಾಣ

ಅಂದೊಮ್ಮೆ ಇಂದೊಮ್ಮೆ । ಯಾಗಾರ್ ಒಮ್ಮೆ
ವರ್ಷಕ್ಕೆ ಒಮ್ಮೆ ಬಂದ್ಹೋಗು ।೨।
ಕಂದ । ಯಾಗೊಳು ಬಂದರೆ ಬೆಲೆಯಿಲ್ಲೆ

ಭಿಕ್ಷೆಗೂ ಲಂಚಕ್ಕೂ । ವ್ಯತ್ಯಾಸ ಉಟ್ಟು
ದುರಾಸೆಯವೇ ಕೈ । ನೀಂಡುದು ।ಬಿ।
ಕಂದ । ಸಂಕಟಂದ ಕೊಡ್ದು ವಿಷ ನಿಂಗೆ

ಕುಪ್ಪಣ್ಣ್ ಆದ । ಮಾವ್ನಣ್ಣ್ ಕೀಸ್
ಕೀಸಿ ತಿಂದರೆ ರುಚಿಯೊಂದು ಬೇರೆ ।ಬಿ।
ಕಂದ । ರಸಿಕಾದಂವನ ಸುಕ ಬೇರೆ

ಕುಡ್ದಂವನೊಟ್ಟಿಗೆ । ಆಡ್ಬೇಡ ಜಗಳ
ಕುಡ್ದದ್ ಇಳ್ದಂಗೆ ಮೂಗ್ ಕೊಯ್ದ ನಾಯಿ ।ಬಿ।
ಕಂದ । ಕೂಡ್ದ ಸಭೆಯೊಳಗೆ ಕಳ್ದೋದೆ ಮಾನ

ಹೊತ್ತಿಗೆ ಮುಂದೆ ಏಳೋಕು । ಮೂಡ್ ದಿಕ್ಕ್‌ನ ನೋಡೋಕು
ಲೋಕದ ಬೆಳ್ಕ್‌ಗೆ ಬಾಗೊಕು ।ಬಿ।
ಕಂದ । ನೂರ್ಕಾಲ ನೋಡುವ ಭಾಗ್ಯ ನಿಂದಾಕು

ಸಿಟ್ಟ್‌ಲಿ ಉಣುಬೇಡ । ನಿತ್ತ್‌ಕಂಡ್ ತಿನ್ಬೇಡ
ಉಂಬಕೇ ಗೈಮೆ ನಮದೆಲ್ಲ ।ಬಿ।
ಕಂದ । ನೆಮ್ಮದಿಲಿ ಉಂಡರೆ ಅರ್‌ಗಣೆ

ಅಲ್ಲಿನೂ ಗುಸು ಗುಸು । ಇಲ್ಲಿನೂ ಗುಸುಗುಸು
ಗುಸು ಗುಸು ಚಾಳಿ ನಿಂಗ್ಯಾಕೆ ? ।ಬಿ।
ಕಂದ । ಮಾಡಿಕೆ ಉಟ್ಟು ಬೇಕಷ್ಟ್

ಪಿಜಿನ್‌ಗ ಹೋದವೆ । ಪಿಜಿನ್‌ಗ ಬಂದವೆ
ಪಿಜಿನ್‌ಗಳ ಶಿಸ್ತ್ ನೋಡೋಕು ।ಬಿ।
ಕಂದ । ಕಲಿಯಕೆ ಉಟ್ಟು ಬಹಳಷ್ಟು

ಆನೆ ಬಂದುಟ್ಟು । ತೋಟಕ್ಕೆ ನುಗ್ಗಿಟ್ಟು
ಗೊನೆ ಬಾಳೆನ ಎಳ್ದ್ ಮುರ್ದುಟ್ಟು ।೨।
ಕಂದ । ತಿರ್‌ಳ್‌ನ ಮಾತ್ರ ತಿಂದುಟ್ಟು

ಕಪಿಗ ಬಂದೊಳೊ । ಕಿತ್ತಾಡಿ ಹೋಗೊಳೊ
ಪೀಚೆ ಕಾಯೆಲ್ಲ ನೆಲಲುಟ್ಟು ।೨।
ಕಂದ । ಮಾಣಿಕದ ಬೆಲೆ ಗೊತ್ತ್‌ಲೆ

ಬೈನೆ ಮರ ಉಟ್ಟು । ಮಡಿಕೆ ಕಟ್ಟಿಟ್ಟು
ಮಡ್ಕೆಲಿ ಕಳ್ಳ್ । ತುಂಬಿಟ್ಟು ।೨।
ಕಂದ । ಸಕ್ಕರೆ ಜೋನಿ ಅಧ್ಹೆಂಗಾತ್ ?

ಚಾಳೆ ಮರ ಉಟ್ಟು । ಈಚಲ್ ಮರ ಉಟ್ಟು
ಕರಿ ಮಡ್ಕೆ ಅಲ್ಲಿ ಕುದ್ದುಟ್ಟು ।೨।
ಕಂದ । ನೊರೆ ನೊರೆ ಕಳ್ಳ್ ಚೆಲ್ಯುಟ್ಟು

ಕಪಿಗ ಮರ ಹತ್ತಿ । ಕಳ್ಳ್ ಕುಡ್ದವೆ
ಕಚ್ಚಾಟ ಕಿರಚಾಟ ಜೋರಾದೆ ।೨।
ಕಂದ । ಮನ್ಸಂಗೂ ಒಂದ್ ಕೈ ಹೆಚ್ಚಾದೆ

ಕುಡಿ ನೀನ್ ಕೊಣಿ ನೀನ್ । ಮಾಡಿವೆ ಒತ್ತಾಯ
ಆರೋಗ್ಯ ಹಾಳಾದೆ ಹೇಳ್ದುಲೆ ।೨।
ಕಂದ । ನಿನ್ನ ಬುದ್ಧಿನ ನೀ ಬುಡ್‌ಬ್ಯಾಡ

ಕುಡಿಯವು ಕುಡಿಯಲಿ । ಕೊಣಿಯವು ಕೊಣಿಯಲಿ
ಬುದ್ಧಿ ಹೇಳವು ಯಾರಿಲ್ಲೆ ।೨।
ಕಂದ । ನಿನ್ನ ಪಾಡಿಗೆ ನೀನಿರ್

ಬಾಳೆಲೆ ಕೊಯ್ಯೊಕು । ಹರಿಯದೆ ತರೊಕು
ಹರ್ದರೆ ಸಾಲ ಆದೆಗಡ ೨।
ಕಂದ । ಸೂಕ್ಷ್ಮಾಗಿ ಬದ್ಕ್ ಮಾಡೊಕು

ಒಂಟಿ ಕೊಳ್ಳಿ । ಹೊತ್ತುದು ಕಷ್ಟಾದೆ
ಜೋಡಿಗೆ ಇನ್ನೊಂದ್ ಬೇಕಾಗಿದೆ೨।
ಕಂದ । ಒಂಟಿ ಕೈ ಚಪ್ಪಾಳೆ ಹೆಂಗಾದೆ ?

ಒಲೆ ತಿಂಟೆ ಬೇಕ್ । ಕಣ್ಣೊಲೆ ಇರೊಕು
ಇದ್ದರೆ ಹೊತ್ತಿದೆ ಧಗ ಧಗ ಕಿಚ್ಚ್ ೨।
ಕಂದ । ಹಿರಿಯವ್ಕೆ ಗೊತ್ತುಟ್ಟು ಒಲೆಗುಟ್ಟು

ಐದಿದ್ದರೆ ಮುಷ್ಠಿ । ಕೈಗುಟ್ಟು ಗಟ್ಟಿ
ನಾನೆಚ್ಚ್ ನೀನೆಚ್ಚ್ ಆಡ್ಬೇಡಿ ಜಗಳ ೨।
ಕಂದ । ಎಲ್ಲವುಕೂ ಉಟ್ಟು ಗೌರವ

ಹಳ್ಸಿದ್ ತಿನ್ಬೇಡ । ಕರ್‌ಗಿದ್ ತಿನ್ಬೇಡ
ಹಳ್ಸಿದ್ ಕರ್‌ಗಿದ್ ವಿಷ ಆದೆ ೨।
ಕಂದ । ಉಪಾಸ ಇದ್ದರೂ ತಿನ್ಬೇಡ

ನಂಗೆ ನೀನ್ ನಿಂಗೆ ನಾನ್ । ದಾರಿಲಿ ಉದ್ಧೋಕೆ ಬೇಕಾದೆ
ಸಂಸಾರದ ದಾರಿಲಿ ಸುಸ್ತಾದೆ ೨।
ಕಂದ । ಬದ್ಕ್‌ಲಿ ಸಮಭಾರ ಹೊರಿಕಾದೆ

ಲಂಚದ್, ಕದ್ದದ್ । ಮನೆಗಂಟ ಎತ್ತುಲೆ
ಗೈದದೇ ಎತ್ತುಲೆ ಕಡೆಮುಟ್ಟ ೨।
ಕಂದ । ಕದ್ದದ್ ಕದ್ದೋದೆ ಗೊತ್ತಿರ್‌ಲಿ


7

ಬೇಕಾಕನ ಬಂದೆವೆ । ಕರ್ದ್ ಮಾತಾಡಿವೆ
ಆಕೆಮುಟ್ಟ ಇಂದ್ರ ಚಂದ್ರತ ಹೇಳಿವೆ ೨।
ಕಂದ । ಇದರ್ನೆ ಹೇಳಿವೆ ಸ್ವಾರ್ಥಾತ

ಅಂಗ್ಯೆ ಹುಣ್ಣಿಗೆ । ಕನ್ನಡಿ ಬೇಡ
ಹಾರಾಟಗೀರಾಟ ಕಂಡೋದೆ ೨।
ಕಂದ । ಇಟ್ಟಿದ್ ಸೊಕ್ಕು ಚೆಟ್ಟಿ ಮುಟ್ಟ

ಬೊಗುಳುವ ನಾಯಿ । ಕಚ್ಚುಲೆಗಡ
ನಾಯಿ ಮನ್ಸ್‌ನ ಕಂಡವ್ ಇಲ್ಲೆ೨।
ಕಂದ । ಪರ ಪರ ಮನ್ಸಂಗೆ ಸಿಟ್ಟ್ ದೂರ ಗಡ

ಖಾಲಿ ಪಾತ್ರದ್ । ಗಣ ಬಣ ಸದ್ದ್
ಕೆಲ್ಸ ಇಲ್ಲದವ್ ಆಡಿವೆ ನೂರ್ ೨।
ಕಂದ । ಅಗತ್ಯಕೆ ಬಾಯಿ ನಿಂದಾಕು

ಹಳ್ತಾದರೂ ಆಗಲಿ । ಮಡಿ ಬಟ್ಟೆ ಹಾಕ್
ಬೆಚ್ಚಂಗೆ ಇರ್‌ಲಿ ಮೈ ತುಂಬ ೨।
ಕಂದ । ಬಟ್ಟೆ ಕಂಡವ್‌ಕೆ ನಮಸ್ಕಾರ

ದರ್ಜಿ ಹೊಲ್ದದೆ । ತರ ತರ ರೀತಿ
ಕಾಲಕೆ ತಕ್ಕಂಗೆ ಬದಲಾದೆ ೨।
ಕಂದ । ದರ್ಜಿನೂ ಒಳ್ಳ ಕಲೆಗಾರ

ಚೌರ ಮಾಡವನ । ಕೈ ಚುರುಕು ನೋಡೊಕು
ತರ ತರ ತಲೆಗೆ ತರಾವರಿ ಶೋಕಿ ೨।
ಕಂದ । ಚೌರದಂವ ಒಳ್ಳ ಕಲೆಗಾರ

ಬೆಳೆತಿದ್ದೊ ಬೆಳೆ । ಕಟ್ಟ್‌ತಿದ್ದೊ ಹೊರೆ
ಮೆಟ್ಟ್‌ತಿದ್ದೊ ಮೆದೆ  ಕಳ ತುಂಬ ।ಎ।
ಕಂದ । ತುಂಬ್‌ತಿದ್ದೊ ಕಡ್ಕೆ ಒಕ್ಲಾಗಿ

ಊಡುವ ಎತ್ತ್‌ಗ । ಬಚ್ಚಿಕೆ ಬತ್ತ್
ವರ್ಷದ ಅನ್ನ  ಎತ್ತ್‌ಗಳ ಹೆಗ್‌ಲ್‌ಲಿ  ಇತ್ತ್ ।ಎ।
ಕಂದ । ಬತ್ತದ ಗದ್ದೆ ಈಗ ಎಲ್ಯೋತ್ ?

ಬಿಳಿಯ, ದೊಡ್ಡಿ । ಜೀರಿಗೆ ಸಣ್ಣ
ಬೆಳೆತಿದ್ದೊ ಅಂದ್  ಕುಸಿಪಟ್ಟ್ ।ಎ।
ಕಂದ । ಗದ್ದೆದ್ ಪೊಲ್ರ್ಜ ಮಾಯಾತ್

ಕಂತೆ ಕಂತೆ ಹುಲ್ಲುನ । ಮೆಟ್ಟ್‌ತಿದ್ದೊ ಅಂದ್
ಮನೆಗೂ ಹೋಸ್‌ತಿದ್ದೊ  ಕೊಟಗೆಗೂ ಹಾಸ್‌ತಿದ್ದೊ  ।ಎ।
ಕಂದ । ದನಕೂ ಬೇಕಿತ್ತ್ ಬುಳ್ಳುಲ್ಲು

ಪಾದಕೆ ಬಂದುಟ್ಟು । ತರಾವರಿ ಮೆಟ್ಟ್
ಹಾಕಿರೆ ಮಾತಾಡಿವೆ  ಗೌರವ ಕೊಟ್ಟ್ ।ಎ।
ಕಂದ । ಉಟ್ಟದ್‌ಕೆ ಈಗ ಕೋಣದ ರೇಟ್

ನಡೆಕೆ ಗೊತ್ತ್‌ಲೆ । ಮಕ್ಕಳಿಗಿಂದ್
ಇಲ್ಲಿ ಹತ್ತಿರೆ  ಇಳ್ದವೆ ಅಲ್ಲಿ ।ಎ।
ಕಂದ । ಶರೀರದ ವ್ಯಾಯಾಮ ಬುಟ್ಟೋತ್

ಟಿ.ವಿ. ಬಂದುಟ್ಟು । ಮನೆಮನೆಗಿಂದ್
ನಿದ್ದೆದ್ ಹೊತ್ತ್  ತಪ್ಪೋತ್ ।ಎ।
ಕಂದ । ತಿಳ್ಕಂಡ್ ನೋಡ್ರೆ ತಪ್ಪಿಲ್ಲೆ

ಮಕ್ಕ ಹೊತ್ತವೆ । ಮಣ ಭಾರ ಇಂದ್
ಬದಲ್ ವ್ಯವಸ್ಥೆಗೆ ಮಾಡೊಕು ಗ್ಯಾನ ೨।
ಕಂದ । ಇಂದಲ್ಲ ನಾಳೆ ಬದಲಾದು

ಬಳಪ, ಸ್ಲೇಟ್ । ಮೂಲೆಗೆ ಹೋತು
ಬದಲಾದ ವ್ಯವಸ್ಥೆಗೆ ಹೊಂದೊಕು ನಾವು ೨।
ಕಂದ । ಮಕ್ಕ ಆಗೊಳೊ ಗಾಂಧಾರಿ ಮೆಣ್ಸ್

ಹುಣ್ಣಮೆ ಚಂದ್ರ । ನೋಡಿಕೆ ಪೊಲ್ಲು
ಅಂಗಳಕೆ ಇಳ್ದ್ ನೋಡೊಮ್ಮೆ ೨।
ಕಂದ । ತಣ್ಣಂಗೆ ಬೆಳ್ಕ್ ಹಾಲಂಗೆ

ತಿಂಗಳ್ ಬೆಳ್ಕ್‌ಲಿ । ಆಕಾಶ ನೋಡು
ಮೋಡಗ ಆಡಿವೆ ಆಕಾಶ ತುಂಬ ೨।
ಕಂದ । ಆಟ ನೋಡುವ ರಸಿಕ ನೀನಾಕು

ಹಳ್ಳೀನ ಬುಡ್‌ಬಡ । ನಗರ ಸೇರ್‌ಬಡ
ಹಳ್ಳೀದ್ ಸಿರಿತನ ಅಲ್ಲಿಲ್ಲೆ ೨।
ಕಂದ । ಹಳ್ಳೀನೆ ಸ್ವರ್ಗ ಎಂದಿಗೂ

ಓದುವ ಅಭ್ಯಾಸ । ಬುಡ್‌ಬಡ ನೀನ್
ಪುಸ್ತಕ ಕೊಟ್ಟದೆ ಮನ್ಸ್‌ಗೆ ಕುಸಿ ೨।
ಕಂದ । ಪುಸ್ತಕ ತುಂಬುಸು ಕೋಣೆಲಿ

ಪುಕ್ಸಟೆ ಕೇಳ್‌ಬಡ । ಪುಕ್ಸಟೆ ಕೊಡ್ಬಡ
ಪುಕ್ಸಟೆ ವಸ್ತುಗೆ ಬೆಲೆಯಿಲ್ಲೆ ೨।
ಕಂದ । ಹೆಂಗಾರ್ ಆಗಲಿ ಋಣ ತೀರ್ಸ್

ಅನ್ನ ಇಕ್ಕಿದ ಕೈಗೆ । ಕಚ್ಚುಲೆ ನಾಯಿ
ಅನ್ನದ ಋಣ ಗೊತ್ತು ನಾಯಿಗೆ ೨।
ಕಂದ । ನರ ಮಾತ್ರ ಮರ್ತದೆ ಅದನೆಲ್ಲ

ಪ್ರಾಣಕ್ಕೆ ಪ್ರಾಣ । ಕೊಟ್ಟವೆ ಪ್ರಾಣಿಗ
ಋಣಿ ಆಕು ನಾವ್ ಅವುಕೆಲ್ಲ ೨।
ಕಂದ । ಅನ್ನ ಉಪ್ಪುದ್ ಋಣ ತೀರುದುಲೆ



**ಶ್ರೀ ಬಾರಿಯಂಡ ಜೋಯಪ್ಪ**ನವು ಮಡಿಕೇರಿ ತಾಲೂಕ್, ಮದೆನಾಡ್‌ನ ಮದೆ ಮಹೇಶ್ವರ ಪ್ರೌಢ ಶಾಲೆಲಿ ಮುಖ್ಯ ಶಿಕ್ಷಕರಾಗಿ ಕಾರ್ಯನಿರ್ವಹಿಸ್ತಾ ಒಳೊ. ಇವು ಕನ್ನಡಲಿ ಬರ್ದ ಯಾರ ಬೇಟೆ ಮತ್ತು ಇತರ ಪ್ರಸಂಗಗಳು ಕತೆ ಪುಸ್ತಕ 1998ರ್‌ಲಿ ಪ್ರಕಟ ಆತ್.

ಇವು ಅರೆಭಾಷೆಲಿ ಬರ್ದ "ಚಾಂಪಾ" ಕಥಾ ಸಂಕಲನ 2003ರ್‌ಲಿ ಪ್ರಕಟ ಆತ್. ಆ ಪುಸ್ತಕ ಅರೆ ಭಾಷೆಲಿ ಹೊರ ಬಂದ ಮೊಟ್ಟ ಮೊದಲ ಕಥಾ ಸಂಕಲನ. ಅದ್ ಅರೆಭಾಷಾ ಸಾಹಿತ್ಯಕೆ ಕೊಟ್ಟ ಒಳ್ಳೆ ಪುಸ್ತಕ ಆಗುಟು.

ಶ್ರೀಯುತ ಜೋಯಪ್ಪನವು ಉತ್ತಮ ಶಿಕ್ಷಕತ ಜಿಲ್ಲಾ ಪ್ರಶಸ್ತಿ ಮತ್ತೆ ಕನ್ನಡ ರಾಜ್ಯೋತ್ಸವ ಜಿಲ್ಲಾ ಪ್ರಶಸ್ತಿ ಪಡ್ಕಂಡ ಮೇಲೆ ರಾಜ್ಯ ಮಟ್ಟದ ಉತ್ತಮ ಶಿಕ್ಷಕ ಪ್ರಶಸ್ತಿ ಸಿಕ್ಕ್ಯುಟ್ಟು. ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನವು 2013 ರ್‌ಲಿ ಇವರ ಸಾಹಿತ್ಯ ಸೇವೆನ ಪರಿಗಣಿಸಿ ಗೌರವ ರಾಜ್ಯ ಪ್ರಶಸ್ತಿಗೆ ಆಯ್ಕೆ ಮಾಡಿಟ್ಟು.

ಇದೀಗ ಶ್ರೀಯುತ ಜೋಯಪ್ಪನವರ "ತೋರಣ" ಕವನ ಸಂಕಲನ ಅರೆಭಾಷೆ ಸಾಹಿತ್ಯಕ್ಕೆ ಹೊಸ ಸೇರ್ಪಡೆ. ಶ್ರೀಯುತ ಜೋಯಪ್ಪನವರ್‌ಂದ ನಾಡಿಗೆ ಇನ್ನೂ ಹಲವಷ್ಟ್ ಸಾಹಿತ್ಯಸೇವೆ ಸಿಕ್ಕಲಿತ ಅಕಾಡೆಮಿ ಆಶಿಸಿ, ಅವುಕೆ ಶುಭಕೋರ್ದೆ.

**– ಸಲಹಾ ಸಮಿತಿ**